# ಪರಿಣೀತಾ

## ೧

ಗುರುಚರಣರು ಒಂದು ಬ್ಯಾಂಕಿನ ಗುಮಾಸ್ತರು. ತಿಂಗಳು ಅರವತ್ತು ರೂಪಾಯಿ ಸಂಬಳ ಬಂದರೂ ಸಾಲುತ್ತಿರಲಿಲ್ಲ. ಹೆಂಣಿನ ಮೇಲೆ ಹೆಂಣು ಹುಟ್ಟಿ ಪರಿವಾರವು ಬೆಳೆದುಬಿಟ್ಟಿತ್ತು. ಅವರ ಸಂರಕ್ಷಣೆಯ ಹೊರೆಯನ್ನು ಹೊತ್ತು ಹೊತ್ತು ಅವರ ಶರೀರ ಬಾಡಿಗೆಯ ಜಟಕಾ ಕುದುರೆಗಳಂತೆ ಕೊರಗಿ ಕಂದಿಹೋಗಿತ್ತು. ನೇತ್ರಗಳಲ್ಲಿನ ನಿಷ್ಕಾಮ ನಿರ್ವಿಕಾರ ನಿರ್ಲಿಪ್ತ ಭಾವನೆಯ ನಿರಂಕುಶ ಪ್ರಭುತ್ವವು ಅವರ ಮುಖದ ಮೇಲಿನ ಮಂದಹಾಸವನ್ನು ಮಾಯಗೊಳಿಸಿತ್ತು.

ಒಂದು ದಿನ ಬೆಳಗಿನ ಜಾವದಲ್ಲಿ ಎದ್ದು ಹರಿದು ಚೂರುಚೂರಾದ ದಿಂಬಿಗೆ ಒರಗಿ ಕುಳಿತು, ಹುಕ್ಕಾ ಕುಡಿಯುತ್ತ ಅಂತರ್ಯಾಮಿಯ ಚಿಂತನೆಯಲ್ಲಿ ತಲ್ಲೀನರಾಗಿದ್ದರು. ಅವರ ಮೂರನೆಯ ಮಗಳು ಅನಾಕಾಲಿಯು ಬಂದು “ಅಪ್ಪಾ ಅಪ್ಪಾ, ಅಮ್ಮನು ನಿರ್ವಿಘ್ನವಾಗಿ ಹೆಂಣು ಮಗುವನ್ನು ಹೆತ್ತಳು. ಮಗು ಬಹು ಸುಂದರವಾಗಿದೆ. ನೀವು ನೋಡುವನಕ್ಕೆ ಹೋಗುವದಿಲ್ಲವೆ?” ಎಂದಳು.

ಹೆಂಡತಿಯು ಐದನೆಯ ಹೆಂಣುಮಗುವನ್ನು ಹೆತ್ತ ಈ ಶುಭಸಮಾಚಾರವು ಕಿವಿಗೆ ಬೀಳುತ್ತಲೇ ಅವರ ಮುಖವು ಅತ್ಯಂತ ವಿಕಾರಗೊಂಡಿತು. ಭಗವಂತನ ಧ್ಯಾನವು ಅಷ್ಟಕ್ಕೇ ನಿಂತಿತು. ಕೈಯಲ್ಲಿದ್ದ ಹುಕ್ಕಾ ಕೈಯ

ಲ್ಲಿಯೇ ಉಳಿಯಿತು. ಆನಂದದ ಬದಲು ಮುಖದ ಮೇಲೆ ಶವದ ಕಳೆಯು ಸುಳಿಯತೊಡಗಿತು. ಮಗಳಕಡೆ ಮುಖ ತಿರುಗಿಸಿ "ಮಗೂ, ನೀರು ತೆಗೆದುಕೊಂಡು ಬಾ, ಬಾಯಾರಿಕೆಯಾಗಿದೆ, ಕುಡಿಯುವೆ" ಎಂದರು.

ಮಗಳು ನೀರು ತರಲು ಹೋದಳು. ಪುನಃ ಪರಮಾತ್ಮನ ಚಿಂತನೆಯ ಬದಲು ಮನೆಯ ವೆಚ್ಚದ ಚಿಂತೆಯು ಅವರನ್ನು ಆವರಿಸಿತು. ಸ್ಟೇಷನ್ನಿನಲ್ಲಿ ಮೂರನೇ ತರಗತಿಯ ಡಬ್ಬಿಯ ತೆರೆದ ಬಾಗಿಲಿನ ಎದುರಿನಲ್ಲಿ ಜಾತ್ರೆ ಪರ್ವಕಾಲಗಳ ಸಮಯದಲ್ಲಿ ಜನರು ಗಂಟುಮೂಟೆ ಹೊತ್ತುಕೊಂಡು ಒಬ್ಬರನ್ನೊಬ್ಬರು ನೂಕಾಡುವಂತೆ ಗುರುಚರಣರ ಮಸ್ತಿಷ್ಕದಲ್ಲಿಯೂ ನಾನಾತರದ ದುಶ್ಚಿಂತೆಗಳು ಒಂದರ ಹಿಂದೊಂದು ಪ್ರಾರಂಭಿಸಿದವು. ಮೊನ್ನೆ ಮೊನ್ನೆ ಆಚೆ ವರುಷ ಎರಡನೆಯ ಮಗಳ ಮದುವೆಗೋಸ್ಕರ ಬವೂಬಾಜಾರಿನಲ್ಲಿದ್ದ ಎರಡಂತಸ್ತಿನ ಮನೆಯನ್ನು ಅದುವು ಇಟ್ಟಾಗಿದೆ, ಸಾಲದ ಆರು ತಿಂಗಳಿನ ಬಡ್ಡಿಯನ್ನು ಇನ್ನೂ ಕೊಡುವದಕ್ಕೆ ಆಗಿಲ್ಲ. ದುರ್ಗಾಪೂಜೆಯೂ ಸಮೀಪಕ್ಕೆ ಬಂತು. ಒಂದು ತಿಂಗಳು ಮಾತ್ರ ಉಳಿಯಿತು. ಬಂಗಾಲಿಗಳ ಈ ದೊಡ್ಡ ಹಬ್ಬದ ಕಾಲಕ್ಕೆ ಮಗಳ ಅತ್ತೆ ಮನೆಗೆ ವಸ್ತ್ರ, ಆಭರಣ, ಮಿಠಾಯಿ ಮೊದಲಾದ ವಸ್ತುಗಳನ್ನು ಕಳಿಸಲೇಬೇಕು. ನಿನ್ನೆ ದಿನ ರಾತ್ರಿ ಎಂಟು ಗಂಟೆಯ ವರೆಗೆ ಕಚೇರಿಯಲ್ಲಿ ಕುಳಿತೆ, ಲೆಕ್ಕವು ಸರಿಯಾಗಲಿಲ್ಲ. ಇವತ್ತು ಮಧ್ಯಾಹ್ನದೊಳಗಾಗಿ ಲೆಕ್ಕವನ್ನು ಸರಿಪಡಿಸಿ ಅವಶ್ಯವಾಗಿ ವಿಲಾಯತಿಗೆ ಕಳಿಸಬೇಕು. ನಿನ್ನೆ ಕಚೇರಿಯಲ್ಲಿ ಹಿರಿಯ ಸಾಹೇಬರು ಕೊಳಕುಬಟ್ಟೆಯನ್ನು ಧರಿಸಿಕೊಂಡು ಬರುವವರು ಆಫೀಸಿನಲ್ಲಿ ಹೆಜ್ಜೆಯನ್ನಿಕ್ಕಬಾರದೆಂದು ಕಟ್ಟಪ್ಪಣೆಯನ್ನಿತ್ತಿದ್ದಾರೆ; ಅಲ್ಲದೆ ಹೊಲಸು ವಸ್ತ್ರವನ್ನುಟ್ಟುಕೊಂಡು ಬಂದವರಿಗೆ ದಂಡವು ವಿಧಿಸಲ್ಪಡುವುದೆಂದು ಕಡುಕಠಿಣ ಕಾಯಿದೆಯನ್ನು ಮಾಡಿದ್ದಾರೆ. ಆದರೆ ಇತ್ತ ಒಂದು ವಾರವಾಯಿತು ಅಗಸನ ಪತ್ತೆಯೆ ಇಲ್ಲ. ಬಟ್ಟೆಗಳನ್ನೆಲ್ಲ ಕಟ್ಟಿಕೊಂಡು ಎಲ್ಲಿಗೋ ಪಲಾಯನ ಮಾಡಿದ ಹಾಗೆ ತೋರುತ್ತದೆ. ಇಂತು ಯೋಚಿಸುತ್ತ ಗುರು

ಚರಣರಿಗೆ ಕುಳಿತುಕೊಳ್ಳುವದಕ್ಕಾಗಲಿಲ್ಲ, ಹಾಗೆಯೇ ದಿಂಬಿನ ಮೇಲೆ ಒರಗಿದರು, ಕೈಯಲ್ಲಿದ್ದ ಹುಕ್ಕಾ ಕೈಯಲ್ಲಿಯೇ ಇತ್ತು, ಅದನ್ನು ಕೆಳ ಗಿಡದೆ ಹಾಗೆಯೆ ಹಿಡಿದುಕೊಂಡಿದ್ದರು. ಮನದಲ್ಲಿಯೇ

"ಪರಮಾತ್ಮಾ, ಕಲಕತ್ತೆಯಲ್ಲಿ ಗಾಡಿ-ಮೋಟಾರುಗಳ ಕೆಳಗೆ ಸಿಕ್ಕು ದಿನಾಲು ಎಷ್ಟೋ ಜನರು ಸಾಯುತ್ತಾರೆ. ಅವರು ನನಗಿಂತಲೂ ನಿನ್ನ ದೃಷ್ಟಿಯಲ್ಲಿ ಹೆಚ್ಚು ಅಪರಾಧಿಗಳೇ! ಕರುಣಾಕರ, ದಯವಿಟ್ಟು ನನ್ನ ಎದೆಯ ಮೇಲೆ ಒಂದು ದೊಡ್ಡ ಮೋಟಾರು ಹಾಯ್ದು ಹೋಗುವಂತೆ ಮಾಡು, ಜೀವನವು ಬೇಡಾಗಿದೆ!" ಎಂದರು.

ಅನ್ನಾಕಾಲಿಯು ನೀರು ತಂದು "ಅಪ್ಪಾ, ಏಳಿ, ನೀರು ಕುಡಿ ಯಿರಿ" ಎಂದಳು.

ಗುರುಚರಣರು ಎದ್ದು ಒಂದು ಲೋಟ ನೀರನ್ನು ಒಂದೇ ಗುಟುಕಿ ನಲ್ಲಿ ಕುಡಿದು, ಮಗಳಿಗೆ ಲೋಟಾ ತೆಗೆದುಕೊಂಡು ಹೋಗುವದಕ್ಕೆ ಅಪ್ಪಣೆಯನ್ನಿತ್ತು ಹಾಗೆಯೇ ಒರಗಿಕೊಂಡರು.

ಲಲಿತೆಯು ನಡುಮನೆಗೆ ಬಂದು "ಮಾವ, ಟೀ ತಂದಿದ್ದೇನೆ, ಏಳಿ." ಎಂದಳು.

ಟೀಯ ಹೆಸರು ಕಿವಿಗೆ ಬೀಳುತ್ತಲೇ ಗುರುಚರಣರು ಎದ್ದು ಕುಳಿತರು. ಲಲಿತೆಯನ್ನು ಮೆಲ್ಲನೆ ಕತ್ತೆತ್ತಿ ನೋಡಿದರು. ಅವರ ಹೃದಯದ ಜ್ವಾಲೆಯು ಅರ್ಧ ಶಾಂತವಾಯಿತು. "ಮಗೂ, ನಿನ್ನೆ ರಾತ್ರಿ ಯೆಲ್ಲಾ ನಿನಗೆ ಜಾಗರಣೆ, ಬಾ, ಸ್ವಲ್ಪ ಹತ್ತಿರ ಬಂದು ಕುಳಿತುಕೋ" ಎಂದರು.

ಲಲಿತೆಯು ನಾಚಿಕೆಯಿಂದ ನಗುತ್ತ ಮಾವನ ಹತ್ತಿರಬಂದ ಳಿತುಕೊಂಡು ನುಡಿದಳು "ನಿನ್ನೆ ರಾತ್ರಿ ನಾನು ಬಹಳ ಕಾಲದವರೆಗೆ ಚ್ಚೆತ್ತಿರಲಿಲ್ಲ ಮಾವ."

ಚಿಂತೆಯಿಂದ ಬಳಲಿ ಬಳಲಿ ಬೆಂದು ಅಕಾಲ ವೃದ್ಧಾಪ್ಯಕ್ಕೆ ಬಲಿ ದ್ದ ತನ್ನ ಮಾವನ ಹೃದಯದಲ್ಲಿ ಇರುವ ವ್ಯಾಕುಲತೆಯ ಆಳವನ್ನು

ಕಂಡುಹಿಡಿದು ಈ ಹುಡುಗಿಯಕಿಂತಲೂ ಹೆಚ್ಚಾಗಿ ಮರುಗುವವರು ಈ ಭೂಮಿಯ ಮೇಲೆ ಮತ್ತಾರೂ ಇರಲಿಲ್ಲ.

"ಇರಬಹುದು ಮಗೂ, ಇನ್ನೂ ಸ್ವಲ್ಪ ಹತ್ತಿರ ಬಾ" ಎನ್ನುತ್ತ ಲಲಿತೆಯನ್ನು ಅತ್ಯಂತ ಸಮೀಪದಲ್ಲಿ ಕುಳ್ಳಿರಿಸಿಕೊಂಡು ಆಕೆಯ ಮಸ್ತಕದ ಮೇಲೆ ತಮ್ಮ ಶುಭಹಸ್ತವನ್ನಿಟ್ಟು "ಈ ದುಃಖಿಯಾದ ಬಡ ಮಾವನ ಮನೆಗೆ ಬಂದು ನೀನು ಬಹಳ ದುಡಿಯಬೇಕಾಗುತ್ತೆ, ಅಲ್ಲವೆ ಮಗೂ?" ಎಂದರು.

ಲಲಿತೆಯು ತಲೆಯಲ್ಲಾಡಿಸಿ "ಬಹಳ ಏಕೆ ದುಡಿಯಬೇಕಾಗುತ್ತೆ ಮಾವ? ಎಲ್ಲರೂ ಎಷ್ಟು ಎಷ್ಟು ಹೊತ್ತು ದುಡಿಯುತ್ತಾರೋ ಅಷ್ಟೇ ನಾನೂ ದುಡಿಯುತ್ತೇನೆ" ಎಂದಳು.

ಗುರುಚರಣರು ನಕ್ಕರು. ಟೀ ಕುಡಿಯುತ್ತ ಕುಡಿಯುತ್ತ "ಹೌದು ಲಲಿತಾ, ಹಾಗಾದರೆ ಇವತ್ತಿನ ದಿನ ಅಡಿಗೆಯನ್ನು ಯಾರು ಮಾಡುವರು?" ಎಂದು ಕೇಳಿದರು.

ಲಲಿತೆಯು ಮಾವನನ್ನು ನೋಡುತ್ತ "ನಾನು" ಎಂದುತ್ತರವನ್ನಿತ್ತಳು.

ಗುರುಚರಣರು ಆಶ್ಚರ್ಯದಿಂದ "ನೀನೇನು ಮಾಡಬಲ್ಲೆ ಮಗೂ? ನಿನಗೆ ಅಡಿಗೆ ಮಾಡಲು ಬರುತ್ತೆಯೆ?" ಎಂದರು.

"ಬರುತ್ತೆ. ಅತ್ತೆಯಿಂದ ಎಲ್ಲವನ್ನೂ ಕಲಿತುಕೊಂಡಿದ್ದೇನೆ."

ಗುರುಚರಣರು ಟೀ ಬಟ್ಟಲನ್ನು ಕೆಳಗಿಟ್ಟು "ನಿಜವಾಗಿಯೂ ನೀನು ಅಡಿಗೆ ಮಾಡಬಲ್ಲೆಯಾ?" ಎಂದು ಕೇಳಿದರು.

"ಅಹುದು, ಮಾಡಬಲ್ಲೆ. ಆಗಾಗ್ಗೆ ಅತ್ತೆಯು ಹೇಳುತ್ತ ಹೋಗುತ್ತಾಳೆ, ನಾನು ಮಾಡುತ್ತೇನೆ" ಎಂದು ಲಲಿತೆಯು ಮುಖವನ್ನು ಕೆಳ ಮಾಡಿದಳು. ಆಕೆಯ ಅಧೋಮಸ್ತಕದ ಮೇಲೆ ಕೈಯನ್ನಿಟ್ಟು ಗುರು ಚರಣರು ಮೌನದಿಂದ ಆಶೀರ್ವದಿಸಿದರು. ಇವತ್ತು ಅವರದೊ ದೊಡ್ಡ ಚಿಂತೆಯು ದೂರಾಯಿತು.

ಗುರುಚರಣರ ಮನೆಯು ಬೀದಿಯ ಒಂದು ತುದಿಯಲ್ಲಿ ಇತ್ತು. ಟೀ ಕುಡಿಯುತ್ತಿರುವಾಗ ಅವರ ದೃಷ್ಟಿ ಆಕಸ್ಮಾತ್ ಕಿಡಿಕೆಯ ಹೊರಗೆ ಹೋಯಿತು. "ಯಾರವರು? ಶೇಖರನೇನು? ತಮ್ಮಾ, ಸ್ವಲ್ಪಕೇಳು, ಕೇಳು!" ಎಂದು ಕೂಗಿದರು.

ಎತ್ತರ, ಬಲಿಷ್ಠ ಮೈಕಟ್ಟಿನ ಸುಂದರ ಯುವಕನೊಬ್ಬನು ನಡು ಮನೆಯಲ್ಲಿ ಬಂದನು. ಗುರುಚರಣರು ಅವನಿಗೆ ಕುಳಿತುಕೊಳ್ಳುವದಕ್ಕೆ ಹೇಳಿ "ಇವತ್ತು ಬೆಳಗ್ಗೆ ನಿನ್ನ ಚಿಕ್ಕಮ್ಮನು ಮಾಡಿದ ಕೆಲಸದ ಸುದ್ದಿ ಯನ್ನು ನೀನು ಕೇಳಿರಬಹುದು" ಎಂದರು.

ಶೇಖರ ನಸುನಕ್ಕು "ಹೆಂಣು ಮಗುವನ್ನು ಹೆತ್ತಳು, ಇದೇ ಕೆಲಸ ಅಲ್ಲವೇ?" ಎಂದ.

ಗುರುಚರಣರು ನೀಳವಾದ ಉಸಿರನ್ನು ಬಿಟ್ಟು "ನೀನೇನೋ ಎಂದು ಬಿಟ್ಟೆ 'ಇದೇ ಕೆಲಸ ಅಲ್ಲವೆ?' ಅಂತಾ. ಅದರ ಫಲಿತಾಂಶದ ಸುಖ ನೀನೇನು ಬಲ್ಲೆ, ಅನುಭವಿಸುವವರಿಗೇ ಗೊತ್ತು." ಎಂದರು.

"ಹಾಗೆ ಮಾತನಾಡಬೇಡಿ ಚಿಕ್ಕಪ್ಪ, ಚಿಕ್ಕಮ್ಮ ಕೇಳಿದರೆ ಬಹ ನೊಂದುಕೊಂಡಾಳು. ದೇವರು ದಯಪಾಲಿಸಿದುದನ್ನು ಆನಂದದಿಂದ ಸ್ವೀಕರಿಸುವದು ಒಳಿತು."

ಗುರುಚರಣರು ಸ್ವಲ್ಪ ಸಮಯ ಸುಮ್ಮನಿದ್ದು ಮಾತಿಗೆ ಪ್ರಾರಂಭಿಸಿದರು "ಆದರೆ—ಆನಂದದಿಂದ ಸ್ವೀಕರಿಸುವದು ಒಳ್ಳೆತೆನ್ನುವದನ್ನು ನಾನೂ ಬಲ್ಲೆ. ಆದರೆ ತಮ್ಮಾ, ದೇವರೂ ಚೆನ್ನಾಗಿ ವಿಚಾರ ಮಾಡುವದಿಲ್ಲ. ನನ್ನಂತಹ ನಿರ್ಭಾಗ್ಯ ಬಡವನ ಮನೆಯನ್ನು ಹೆಣ್ಣುಮಕ್ಕಳಿಂದ ಏಕೆ ತುಂಬಬೇಕು? ಈ ಇರುವ ಮನೆಯನ್ನು ನಿನ್ನ ತಂದೆಯವರಲ್ಲಿ ಅಡವು ಇಟ್ಟಿದ್ದೇನೆ. ಇದು ಮಾರಿ ಹೋದರೂ ನನಗೆ ದುಃಖವಿಲ್ಲ ಮಗೂ. ಆದರೆ ಒಂದು ಹೊಣೆಯು ದೂರಾಯಿತೆನ್ನುವಷ್ಟರಲ್ಲಿ ಮತ್ತೊಂದು ಚಿಂತೆಯು ತಲೆಯಲ್ಲಿ ಪ್ರವೇಶಮಾಡಿ ಪೀಡಿಸುತ್ತೆ. ಈ ಲಲಿತೆಯನ್ನೇ ನೋಡು, ಚಿನ್ನದ ದೇವೀ ಪ್ರತಿಮೆಯಂತೆ ಎಷ್ಟು ಸುಂದ

ರವಾಗಿದ್ದಾಳೆ. ರೂಪಗುಣರಾಶಿಯಿಂದ ತುಂಬಿದ ಈ ತಬ್ಬಲಿ ಬಾಲಿಕೆ ರಾಜರ ಮನೆಯ ಸೊಸೆಯಾಗಲಿಕ್ಕೇ ಯೋಗ್ಯಳಾಗಿದ್ದಾಳೆ. ಈ ರತ್ನಕ್ಕೆ ತಕ್ಕ ಮುಕುಟವು ಓರ್ವ ಬಡ ತಾಯಿಯ ಮನೆಯಲ್ಲಿ ಹೇಗೆ ದೊರಕೀತು? ನೀನೇ ಹೇಳು, ನಾನು ಬದುಕಿರುವಾಗ, ಈ ರತ್ನವನ್ನು ಅಂತಿಂತಹ ಯುವಕನ ಕೊರಳಲ್ಲಿ ಹೇಗೆ ಕಟ್ಟಲಿ? ಈ ಕನ್ಯಾರತ್ನಕ್ಕೆ ಸೆಯೋ ಕೋಹಿನೂರರತ್ನ? ಈ ರತ್ನವನ್ನು ಯಾವ ರತ್ನಗಳೂ ಸರಿಗಟ್ಟಲಾರವು. ಇಂತಹ ಈ ರತ್ನದ ಬೆಲೆಯನ್ನು ಕಂಡು ಹಿಡಿಯುವಂತಹ ಜನರು—ಗುಣಗ್ರಾಹಕರು ಯಾರು ಇಲ್ಲಿದ್ದಾರೆ? ಈ ದಿನಗಳಲ್ಲಿಯೂ ಹುಡುಗರು ಹುಡುಗಿಯ ತಂದೆಯ ಸಂಪತ್ತಿಯನ್ನೇ ನೋಡುತ್ತಾರೆ. ಆದುದರಿಂದ ಶೇಖರ, ಹತ್ತಿರ ಹಣವಿಲ್ಲದ್ದರಿಂದ ವಿವಶನಾಗಿ ಈ ರತ್ನವನ್ನು ಓರ್ವ ಕಗ್ಗ ಬಡ ಹಳ್ಳಿಗನ ಕೊರಳಿನಲ್ಲಿ ಕಟ್ಟುವ ಪ್ರಸಂಗವು ಒದಗಿದೆ. ಆಗ ನನ್ನ ಎದೆಯಲ್ಲಿ ಎಷ್ಟು ವೇದನೆಯಾಗುವದು ಹೇಳಬಲ್ಲೆಯಾ? ಈವಾಗ ಲಲಿತೆಗೆ ಹದಿಮೂರು ವರ್ಷ. ಮದಿವೆಯನ್ನು ಗೊತ್ತುಮಾಡಬೇಕೆಂದರೆ ಹದಿಮೂರು ಕಾಸು ಕೂಡ ಹತ್ತಿರಿಲ್ಲ ಕಂಡಿಯಾ. ಎಲ್ಲಿಯಾದರೂ ಸಾಲ ತೆಗೆಯಬೇಕೆಂದರೆ ಸಾಲ ಕೂಡ ಹುಟ್ಟುವ ಹಾಗಿಲ್ಲ, ಇಂತಹ ದಿನಗಳು ಬಂದಿವೆ."

ಗುರುಚರಣರ ಕಣ್ಣುಗಳಲ್ಲಿ ಕಂಬನಿಗಳು ತುಂಬಿ ಬಂದವು. ಶೇಖರ ಅವರ ಮಾತುಗಳನ್ನು ಸುಮ್ಮನೆ ಕುಳಿತುಕೊಂಡು ಆಲಿಸುತ್ತಿದ್ದ. ಪುನಃ ಗುರುಚರಣರು ಅದೇ ಮಾತನ್ನು ಮುಂದುವರಿಸಿದರು "ತಮ್ಮಾ ಶೇಖರನಾಥ, ನೀನೇ ಮಾರ್ಗವನ್ನು ತೋರಿಸಯ್ಯಾ. ನಿನಗೆ ಇಷ್ಟ ಮಿತ್ರರು, ಒಡನಾಡಿಗಳು, ಸಹಪಾಠಿಗಳು, ಪರಿಚಯದ ಅನೇಕ ಯುವಕರು ಇದ್ದಾರೆ. ಯಾರಾದರೂ ನಿನ್ನ ಮಾತನ್ನು ಕೇಳಿ ಈ ಹುಡಿಗಿಯನ್ನು ಮದಿವೆಯಾಗಲು ಒಪ್ಪಿದರೆ, ನೀನೇ ಈಕೆಯ ಉದ್ಧಾರವನ್ನು ಮಾಡಿದಂತಾಗುವದು. ಇತ್ತಿತ್ತಲಾಗಿ ಎಷ್ಟೋ ಸುಶಿಕ್ಷಿತ ನವಯುವಕರು ವರದಕ್ಷಿಣೆ, ಕನ್ಯಾಶುಲ್ಕ ಮುಂತಾದ ಹಳೆಯ ರೂಢಿಗಳ ವಿರುದ್ಧ

ವಾಗಿ ವಿಪ್ಲವವನ್ನು ಹೂಡಿದ್ದಾರೆಂದೂ, ಬಡವರ ಹುಡುಗಿಯರೊಡನೆಯೇ ಮದುವೆಯಾಗುತ್ತಿದ್ದಾರೆಂದೂ ಕೇಳುತ್ತಿದ್ದೇನೆ. ದೈವಯೋಗದಿಂದಲೂ ಈಶ್ವರನ ಕೃಪೆಯಿಂದಲೂ ನಿನ್ನ ಪ್ರಯತ್ನದಿಂದಲೂ ಯೋಗ್ಯ ವರನು ದೊರೆತು ನನ್ನ ಚಿಂತೆಯ ನೇಣಿನ ನುಲಿಯು ಕತ್ತರಿಸಿ ಹೋಗುವ ಸಂಭವವೂ ಉಂಟು. ಮಗೂ, ನೀನು ರಾಜನಾಗೆಂದು ಅಂತಃಕರಣದಿಂದ ನಿನ್ನನ್ನು ಹರಸುವೆ, ಹೆಚ್ಚಿಗೇನು ಹೇಳಲಿ ಮಗೂ, ನಿಮ್ಮಂತಹವರ ಆಶ್ರಯದ ಭರವಸೆಯಿಂದಲೇ ಈವರೆಗೂ ಬದುಕಿಕೊಂಡಿದ್ದೇನೆ. ನಿನ್ನ ತಂದೆಯವರಂತೂ ನನ್ನನ್ನು ತಮ್ಮ ತಮ್ಮನೆಂದೇ ತಿಳಿದುಕೊಂಡಿದ್ದಾರೆ; ಮತ್ತು ಅದೇ ರೀತಿಯಾಗಿ ನನ್ನೊಡನೆ ನಡಕೊಳ್ಳುತ್ತಾರೆ."

"ಒಳ್ಳೇದು, ನನ್ನಿಂದ ಸಾಧ್ಯವಾದಷ್ಟು ಮಟ್ಟಿಗೆ ಪ್ರಯತ್ನ ಮಾಡಿ ನೋಡುವೆ" ಎಂದ ಶೇಖರ.

"ಮರೆಯಬೇಡ ಮಗೂ, ಲಲಿತೆಯ ವಿಷಯವಾಗಿ ನಿನಗೆ ಹೆಚ್ಚಿಗೆ ಹೇಳುವುದು ಏನಿದೆ? ನಿನಗೆ ಎಲ್ಲವೂ ಗೊತ್ತು. ಅವಳು ಎಂಟು ವರ್ಷದವಳು ಇರುವಾಗಿನಿಂದಲೇ ನಿನ್ನಿಂದ ಓದು ಹೇಳಿಸಿಕೊಳ್ಳುತ್ತಿದ್ದಾಳೆ. ಇವಳ ಗುಣ-ಶೀಲ-ಸ್ವಭಾವ ಹೇಗಿದೆಯೆನ್ನುವುದು ನೀನು ನೋಡಿಯೇ ಇದ್ದೀಯಾ. ಪಾಪ, ಇಷ್ಟು ಚಿಕ್ಕ ಹುಡುಗಿ ಇವತ್ತಿನಿಂದ ಮನೆಯಲ್ಲಿ ಒಬ್ಬಳೇ ಅಡಿಗೆ ಮಾಡಬೇಕಾಗುವುದು, ಎಲ್ಲರಿಗೂ ಊಟಕ್ಕೆ ಬಡಿಸಬೇಕಾಗುವುದು. ಅತ್ತೆಯ ಆರೈಕೆ ಮಾಡಬೇಕಾಗುವುದು. ಮನೆತನದ ಸರ್ವ ಕಾರ್ಯವನ್ನೆಲ್ಲ ತೂಗಿಸಿಕೊಂಡು ಹೋಗುವ ಭಾರ ಇವಳ ಮೇಲೆಯೇ ಬಿದ್ದಿದೆ."

ಒಂದು ಸಲ ಲಲಿತೆಯು ದೃಷ್ಟಿಯನ್ನು ಮೇಲ್ಮಾಡಿ ನೋಡಿ ಪುನಃ ಕೆಳಗೆ ನೋಡತೊಡಗಿದಳು. ಅವಳ ಚಿಕ್ಕ ಕೆಂದುಟಿಗಳಲ್ಲಿ ನಸುನಗೆಯು ಮೂಡಿ ಅರಳಿ ಕೆನ್ನೆಗಳಲ್ಲಿ ಮಾಯವಾಯಿತು. ಗುರುಚರಣರು ಒಂದು ನಿಟ್ಟುಸಿರು ಬಿಟ್ಟು "ಲಲಿತೆಯ ತಂದೆಯವರು ಏನು ಕಡಿಮೆ ಗಳಿಸಿ

ದ್ದರೆ? ಸರ್ವಸ್ವವನ್ನೂ ದಾನಮಾಡಿ, ಮಗಳ ಮದುವೆಗೆ ಒಂದು ಕಾಸು ಕೂಡ ಇಡದೆ ಕಂಣು ಮುಚ್ಚಿಕೊಂಡು ಹೊರಟು ಹೋದರು" ಎಂದರು.

ಶೇಖರ ಮಾತನಾಡಲಿಲ್ಲ.

"ಅವರು ಏನೂ ಇಟ್ಟು ಹೋಗಲಿಲ್ಲವೆಂದಾದರೂ ಹೇಗೆ ಹೇಳಲಿ? ತಮ್ಮ ದಾನದ, ಬಡವರ ದುಃಖಗಳನ್ನು ದೂರಮಾಡಿದ ಬಗ್ಗೆ ದೊರೆತ ಫಲವನ್ನು ಈ ಮಗಳಿಗೆ ಕೊಟ್ಟು ಹೋಗಿದ್ದಾರೆ. ಆದುದರಿಂದಲೇ ಈ ಹುಡುಗಿ ಅನ್ನಪೂರ್ಣೆಯಾಗಿದ್ದಾಳೆ! ಇಷ್ಟು ಶಾಂತ ಸುಶೀಲೆಯಾಗಿದ್ದಾಳೆ. ನೀನೇ ಹೇಳು ಶೇಖರ, ಹೌದೋ ಅಲ್ಲವೋ?"

ಏನೂ ಉತ್ತರವನ್ನೀಯದೇ ಶೇಖರ ನಗಲಾರಂಭಿಸಿದ.

ಶೇಖರನು ಎದ್ದು ಹೊರಡಲು ಸಿದ್ಧನಾದುದನ್ನು ನೋಡಿ "ಇಷ್ಟೊತ್ತಿನಲ್ಲಿ ಎಲ್ಲಿಗೆ ಹೋಗುತ್ತೀಯಾ?" ಎಂದು ಗುರುಚರಣರು ಕೇಳಿದರು.

"ಬ್ಯಾರಿಸ್ಟರ ಸಾಹೇಬರ ಬಂಗಲೆಗೆ. ಮೊಕದ್ದಮೆ ಇದೆ" ಎಂದು ಉತ್ತರವನ್ನೀಯುತ್ತ ಎದ್ದು ನಿಂತ. ಗುರುಚರಣರು ಪುನಃ ಆತನಿಗೆ ನೆನಪುಕೊಟ್ಟರು—ನಾನು ಹೇಳಿದ್ದನ್ನೆಲ್ಲ ಲಕ್ಷ್ಯದಲ್ಲಿಟ್ಟುಕೊಂಡಿರು ಮಗೂ. ಇವಳ ಬಣ್ಣ ಸ್ವಲ್ಪ ನಸುಗಪ್ಪು. ಆದರೆ ಇಂತಹ ಕಂಣು, ಮುದ್ದಾದ ಮುಖ, ನಲ್ಮೆಯ ನಗೆ, ದಯೆ ಮತ್ತು ಮಮತೆಯಿಂದ ತುಂಬಿದ ಹೃದಯ ಜಗತ್ತಿನಲ್ಲೆಲ್ಲ ಹುಡುಕಿದರೂ ಯಾರಿಗೂ ಇನ್ನೆಲ್ಲಿಯೂ ಸಿಕ್ಕಲಿಕ್ಕಿಲ್ಲ.

ಶೇಖರ ತಲೆಯಲ್ಲಾಡಿಸಿ ನಗುತ್ತ ಹೊರಟು ಹೋದ. ಈ ಹುಡುಗನ ವಯಸ್ಸು ಸುಮಾರು ೨೫-೨೬ ಇರಬಹುದು. ಎಂ. ಎ. ಪಾಸು ಮಾಡಿದ್ದಾನೆ. ಆಚೆ ವರ್ಷ ಮತ್ತೆ ಅಭ್ಯಾಸ ಮಾಡಿ ಪರೀಕ್ಷೆ ಕೊಟ್ಟು ಅಟರ್ನಿ ಆಗಿದ್ದಾನೆ. ಇವನ ತಂದೆಯವರು ಬೆಲ್ಲದ ವ್ಯಾಪಾರದಿಂದ ಲಕ್ಷಾಂತರ ರೂಪಾಯಿಗಳನ್ನು ಗಳಿಸಿ, ಆ ಉದ್ಯೋಗವನ್ನು ಬಿಟ್ಟು ಈಗ ಮನೆಯಲ್ಲಿಯೇ ಕುಳಿತುಕೊಂಡು ಸಾಹುಕಾರಿಕೆ ಮಾಡುತ್ತಿದ್ದಾರೆ. ಇವರ ಹೆಸರು ನವೀನಚಂದ್ರರಾಯರು ಎಂದು. ಇವರ ಹಿರಿಯ ಮಗ

ಅವಿನಾಶರಾಯ ವಕೀಲೀ ಮಾಡುತ್ತಾನೆ. ಚಿಕ್ಕ ಮಗ ಈವಾಗ ಬ್ಯಾರಿಸ್ಟರರ ಬಂಗಲೆಗೆ ಹೋದ ಶೇಖರನಾಥ. ಬೀದಿಯಲ್ಲೆಲ್ಲ ಇವರ ಮೂರು ಮಹಡಿಗಳ ಮನೆಯೇ ಹೆಚ್ಚು ಎತ್ತರವಾದುದು. ಇವರ ಮನೆಯ ಮಾಳಿಗೆಯೊಡನೆ ಗುರುಚರಣರ ಮನೆಯ ಮಾಳಿಗೆಯ ಮಾರ್ಗದಿಂದ ಒಬ್ಬರ ಮನೆಗೆ ಮತ್ತೊಬ್ಬರು ಹೋಗಿ ಬರುತ್ತಿದ್ದರು. ಮಾಳಿಗೆಯ ಮಿಲನವಾದಂತೆ ಪರಿವಾರಗಳ ಮಿಲನವೂ ಆಗಿದ್ದಿತು. ಎರಡೂ ಪರಿವಾರಗಳಲ್ಲಿ ಪರಸ್ಪರ ಪ್ರೀತಿಯೂ ಆತ್ಮೀಯತೆಯೂ ಬೆಳೆದು ಮರವಾಗಿ ನಿಂತಿತ್ತು.

೨

ಶ್ಯಾಮಬಾಜಾರಿನ ಒಬ್ಬ ಶ್ರೀಮಂತರ ಮನೆಯಲ್ಲಿ ಶೇಖರನ ಮದುವೆಯ ಮಾತು ಬಹಳ ದಿನಗಳಿಂದ ನಡೆಯುತ್ತಿತ್ತು. ಒಂದು ದಿನ ಆ ಮನೆಯವರು ವರನನ್ನು ನೋಡಲು ಬಂದು ಮುಂದಿನ ತಿಂಗಳಲ್ಲಿ ಮದುವೆಯ ಮುಹೂರ್ತವನ್ನು ನಿಶ್ಚಯಿಸಬೇಕೆಂದು ಹೇಳಿ ಹೋದರು. ಆದರೆ ಶೇಖರನ ತಾಯಿಗೆ ಇದು ಸರಿಬರಲಿಲ್ಲ. ಮೊದಲು ಹುಡುಗನು ಹುಡುಗಿಯನ್ನು ನೋಡಬೇಕು. ಅವನ ಮನಸ್ಸಿಗೆ ಬಂದರೆ ಮುಹೂರ್ತವನ್ನು ಗೊತ್ತುಮಾಡಬೇಕೆಂದು ತಮ್ಮ ಪತಿದೇವರಿಗೆ ಹೇಳಿ ಕಳಿಸಿದರು.

ನವೀನರಾಯರ ದೃಷ್ಟಿ ವರದಕ್ಷಿಣೆಯ ಮೇಲೆಯೇ ಇತ್ತು. ಆದುದರಿಂದ ಹೆಂಡತಿಯ ಈ ಮಾತುಗಳು ಅವರಿಗೆ ಸರಿಬರಲಿಲ್ಲ. ಒಳಕ್ಕೆ ಬಂದು ಅಪ್ರಸನ್ನತೆಯಿಂದ "ಏನು ಎನ್ನುತ್ತೀಯೆ ನೀನು? ಈವಾಗೇನು ಇದರ ಆವಶ್ಯಕತೆ? ಹುಡುಗಿಯನ್ನು ನಾವು ನೋಡಿಯೇ ಆಗಿದೆ. ಮೊದಲು ಮದುವೆ ನಿಶ್ಚಿತವಾಗಲಿ. ಆ ಮೇಲೆ 'ಆಶೀರ್ವಾದ' * ದ ದಿನ ಹುಡುಗಿಯನ್ನು ಚೆನ್ನಾಗಿ ನೋಡಿಕೊಂಡು ಬಂದರಾಯಿತು" ಎಂದರು.

ಹೆಂಡತಿಯು ಈ ಮಾತಿಗೆ ಒಪ್ಪಿಗೆಯನ್ನು ಕೊಡಲಿಲ್ಲ ಮತ್ತು ನಿಶ್ಚಿತ ವಚನವನ್ನೂ ಕೊಡಗೊಡಲಿಲ್ಲ. ಇದರಿಂದ ನವೀನರಾಯರು

ಕೋಪಿಸಿಕೊಂಡು ಆ ದಿನ ಬಹಳ ಸಮಯದ ವರೆಗೆ ಊಟವನ್ನೇ ಮಾಡ ಲಿಲ್ಲ. ಇಡೀ ದಿನವನ್ನು ಪಡಸಾಲೆಯಲ್ಲಿಯೇ ಒರಗಿಕೊಂಡು ಕಳೆದರು.

ಶೇಖರ ಹೊಸಕಾಲದ ಹೊಸಮರುಪಿನ ಹುಡುಗ. ಮೂರನೆ ಮಹಡಿಯಲ್ಲಿ ಅವನ ರೂಮು. ಇಪ್ಪತ್ತನೆಯ ಶತಮಾನದ ಫೆಶನೇಬಲ್ ಸಾಮಾನುಗಳಿಂದ, ಕಲಾಪರಿಪೂರ್ಣವಾದ ಪದಾರ್ಥಗಳಿಂದ ನಯನಾಭಿರಾಮವಾಗಿ ಸಿಂಗರಿಸಲ್ಪಟ್ಟಿದೆ. ಮೇಲೆ ವಿವರಿಸಿದ ಮದುವೆಯ ಮಾತುಗಳಾದ ಮೇಲೆ ಕೆಲವು ದಿನಗಳು ಗತಿಸಿಹೋದುವು. ಒಂದು ದಿನ ತನ್ನ ರೂಮಿನಲ್ಲಿ ಸಾಯಂಕಾಲ ಸುಮಾರು ಐದು ಗಂಟೆಗೆ ನಿಲುಗನ್ನಡಿಯ ಎದುರಿನಲ್ಲಿ ನಿಂತುಕೊಂಡು ಕ್ರಾಪು ಬಾಚಿಕೊಳ್ಳುತ್ತಿದ್ದ. ಒಮ್ಮಿಂದೊಮ್ಮೆ ಲಲಿತೆಯು ಅಲ್ಲಿಗೆ ಬಂದಳು. ಸ್ವಲ್ಪ ಸಮಯ ಸ್ತಬ್ಧಳಾಗಿ ನಿಂತಳು. ಶೇಖರ ಮಾತನಾಡಿಸಲಿಲ್ಲ. ಅವಳು "ಹುಡುಗಿಯನ್ನು ನೋಡುವದಕ್ಕೆ ಹೋಗುವದಿಲ್ಲವೆ?" ಎಂದಳು.

ಶೇಖರ ಹಿಂತಿರುಗಿ ನೋಡಿ "ನೀನು ಬಂದೆಯೋ! ಸರಿ, ಒಳ್ಳೇದೇ ಆಯಿತು. ಬಾ. ನನ್ನನ್ನು ಚೆನ್ನಾಗಿ ಸಿಂಗರಿಸು. ನನ್ನನ್ನು ನೋಡಿದ ಕೂಡಲೇ ಹುಡುಗಿ ಮೋಹಿತವಾಗುವ ಹಾಗೆ ಅಲಂಕಾರ ಮಾಡು" ಎಂದ.

ಲಲಿತೆಯು ನಕ್ಕು "ಈವಾಗ ನನಗೆ ಬಿಡುವು ಇಲ್ಲ. ರೂಪಾಯಿಗಳನ್ನು ತೆಗೆದುಕೊಂಡು ಹೋಗಲು ಬಂದಿದ್ದೇನೆ" ಎಂದು ದಿಂಬಿನ ಕೆಳಗಿದ್ದ ಬೀಗದ ಕೈಯನ್ನು ತೆಗೆದುಕೊಂಡಳು. ಖಜಾನೆಯನ್ನು ತೆರೆದು ರೂಪಾಯಿಗಳನ್ನು ಸೀರೆಯ ಸೆರಗಿನಲ್ಲಿ ಕಟ್ಟಿಕೊಳ್ಳುತ್ತ ತನ್ನಷ್ಟಕ್ಕೆ ತಾನೇ "ರೂಪಾಯಿಗಳು ಬೇಕಾದಾಗ ತೆಗೆದುಕೊಂಡೇ ಹೋಗುತ್ತೇನೆ, ಆದರೆ ಅವನ್ನು ತಿರುಗಿ ಮುಟ್ಟಿಸುವ ಬಗೆ ಹೇಗೆ?" ಎಂದಳು.

* ಬಂಗಾಲಿ ಜನರಲ್ಲಿ ಇದೊಂದು ರೂಢಿ. ಮದುವೆಯ ಪೂರ್ವದಲ್ಲಿ ವರಪಕ್ಷದವರು ಕನ್ಯೆಯ ಮನೆಗೆ ಹೋಗಿ ಕನ್ಯೆಗೆ ದ್ರವ್ಯ ಕೊಟ್ಟು ಆಶೀರ್ವದಿಸಿ ಕನ್ಯೆಯನ್ನು ಚೆನ್ನಾಗಿ ಪರೀಕ್ಷಿಸಿ ನೋಡಿ ಬರುವರು.

ಶೇಖರ ಮುಖಕ್ಕೆ ಓಟ್ಮೈನ್ ಸ್ನೋ ಹಚ್ಚಿಕೊಳ್ಳುತ್ತಿದ್ದ. ತುಟಿಗಳ ಮೇಲೆ ಬೆರಳುಗಳನ್ನಾಡಿಸುತ್ತ "ಮುಟ್ಟುವನೋ ಅಥವಾ ಮುಟ್ಟುತ್ತ ಇವೆಯೋ ? " ಎಂದ.

ಲಲಿತೆಗೆ ಈ ಮಾತಿನ ಅರ್ಥವಾಗಲಿಲ್ಲ. ಶೇಖರನನ್ನು ನೋಡುತ್ತ ನಿಂತು ಬಿಟ್ಟಳು.

"ಏನು ನೋಡುತ್ತಿದ್ದೀಯೆ ? ತಿಳಿಯಲಿಲ್ಲವೆ ? "

"ಇಲ್ಲ"

"ಇನ್ನೂ ಸ್ವಲ್ಪ ದೊಡ್ಡವಳು ಆದೆಯೆಂದರೆ ಎಲ್ಲವೂ ತನ್ನಷ್ಟಕ್ಕೆ ತಾನೇ ತಿಳಿಯುವುದು" ಎಂದು ಶೇಖರ ಮೆಟ್ಟುಗಳನ್ನು ಹಾಕಿಕೊಂಡು ಹೊರಟು ಹೋದ.

ಹುಡುಗಿಯನ್ನು ನೋಡಿ ಬಂದು ರಾತ್ರಿ ಮಂಚದ ಮೇಲೆ ಮಲಗಿಕೊಂಡಿದ್ದ. ಅವನ ತಾಯಿಯವರು ಅಲ್ಲಿಗೆ ಬಂದರು. ಎದ್ದು ಅವರನ್ನು ಆದರದಿಂದ ಬರಮಾಡಿಕೊಂಡ. ತಾಯಿಯವರು ಕುರ್ಚಿಯ ಮೇಲೆ ಕುಳಿತು "ಹುಡುಗಿ ಹೇಗಿದ್ದಾಳೆ ? ಏನೂ ಹೇಳಲೇ ಇಲ್ಲವಲ್ಲೋ ಶೇಖರ ? " ಕೇಳಿದರು.

ಶೇಖರ ತಾಯಿಯ ಮುಖವನ್ನು ನೋಡಿ ನಕ್ಕು "ಚೆನ್ನಾಗಿದ್ದಾಳೆ" ಎಂದ.

ಶೇಖರನ ತಾಯಿಯವರ ಹೆಸರು ಭುವನೇಶ್ವರಿ. ಅವರಿಗೆ ೫೦ ವರ್ಷಗಳಾಗಿದ್ದರೂ ನೋಡಲು ೩೫-೩೬ ವರ್ಷದವರಂತೆ ಕಾಣುತ್ತಿದ್ದರು. ಅವರ ಪ್ರತಿಯೊಂದು ಅಂಗವು ಪುಷ್ಟವಾಗಿ, ಸುಂದರವಾಗಿ ಸುದೃಢವಾಗಿತ್ತು. ಈ ಸುಂದರ ಶರೀರ-ಹೊದಿಕೆಯಲ್ಲಿ ಇದ್ದ ತಾಯಿಯ ಹೃದಯವು ಇನ್ನೂ ಸುಂದರವಾಗಿದ್ದಿತು, ಕೋಮಲವಾಗಿದ್ದಿತ್ತು. ಅವರು ಒಬ್ಬ ಹಳ್ಳಿಯ ಹುಡುಗಿ. ಪಾಲನೆ ಪೋಷಣೆಯು ಹಳ್ಳಿಯಲ್ಲಾಗಿದ್ದರೂ ಮದುವೆಯಾಗಿ ನಗರಕ್ಕೆ ಬಂದ ಮೇಲೆ ನಗರದ ಜನರಲ್ಲಿ ಬೆರೆತು ಹೋದರು. ಒಂದು ದಿನವೂ ಅವರ ಹಳ್ಳಿಗತನವು ಹೊರಬೀಳಲಿಲ್ಲ. ನಗರದ ಹೆಣ್ಣುಮಕ್ಕಳ ರೀತಿ, ಶಿಷ್ಟಾಚಾರಸೌಜನ್ಯ, ಚಟುವಟಿಕೆ, ನಸು

ನಗೆ ಒನಪುಒಯ್ಯಾರಗಳ—ಹಳ್ಳಿಯ ಹೆಂಗಸರ ಸರಳತೆ, ಪ್ರಾಮಾಣಿಕತನ, ಮಧುರ ನುಡಿಯ ಸುಂದರ ಸಮನ್ವಯದ ಮೂರ್ತಿಯಾಗಿದ್ದರು.

ಆದುದರಿಂದಲೇ ಶೇಖರ ತನ್ನ ತಾಯಿಯಲ್ಲಿ ಅಷ್ಟೊಂದು ಶ್ರದ್ಧೆಯನ್ನಿಟ್ಟುಕೊಂಡಿದ್ದ. ತಾಯಿಯ ಬಗ್ಗೆ ಆತನಿಗೆ ಅಭಿಮಾನವಿತ್ತು. ತನ್ನ ಬಗ್ಗೆ ಇಷ್ಟೊಂದು ಗೌರವವನ್ನಿಟ್ಟುಕೊಂಡಿರುತ್ತಾನೆಂದು ಶೇಖರನ ತಾಯಿಗೂ ಗೊತ್ತಿರಲಿಲ್ಲ. ಪರಮಾತ್ಮನು ಶೇಖರನಿಗೆ ಸರ್ವಸ್ವನ್ನು ಕೊಟ್ಟಿದ್ದನು—ಸೌಭಾಗ್ಯಕ್ಕೆ ಸುಲಭವಾದ ಹಾಗೂ ದುರ್ಲಭವಾದ ವಸ್ತುಗಳೆಲ್ಲವೂ ಅವನಿಗೆ ದೊರಕಿದ್ದವು. ಅಸಾಧಾರಣವಾದ ಆರೋಗ್ಯವಿತ್ತು. ರೂಪ, ಗುಣ, ಐಶ್ವರ್ಯ, ವಿದ್ಯಾ, ಎಲ್ಲವೂ ಇತ್ತು. ಇವೆಲ್ಲವುಗಳಿಗಿಂತಲೂ ಇಂತಹ ತಾಯಿಯು ತನಗೆ ದೊರಕಿದುದು ಒಂದು ಮಹಾಸೌಭಾಗ್ಯವೆಂದು ಅವನು ಭಾವಿಸುತ್ತಿದ್ದ. ತನಗೆ ಪರಮಾತ್ಮನು ಈ ಸರ್ವಶ್ರೇಷ್ಠದಾನವನ್ನು ಕೊಟ್ಟಿದ್ದಾನೆಂದು ತಿಳಿದುಕೊಂಡು ತಾಯಿಯನ್ನು ಮನೋವಾಕ್ಕಾಯಗಳಿಂದ ಪೂಜಿಸುತ್ತಿದ್ದ.

“ಚೆನ್ನಾಗಿದ್ದಾಳೆಯೆಂದು ಹೇಳಿ ಸುಮ್ಮನಾದೆಯಲ್ಲೋ?”

ಶೇಖರ ನಗುತ್ತ ತಲೆಬಾಗಿಸಿ “ನೀನು ಕೇಳಿದಷ್ಟಕ್ಕೆ ಉತ್ತರವನ್ನಿತ್ತೆನಲ್ಲಮ್ಮಾ! ಹೆಚ್ಚಿಗೆ ಏನು ಹೇಳಲಿ?” ಎಂದ.

ತಾಯಿಯವರೂ ನಕ್ಕು ಬಿಟ್ಟರು. ಪುನಃ “ನಾನು ಕೇಳಿದ ಪ್ರಶ್ನೆಗೆ ನೀನು ಸವಿಸ್ತರವಾಗಿ ಉತ್ತರವನ್ನೇ ಕೊಡಲಿಲ್ಲ. ಹುಡುಗಿಯ ಮೂಗು, ಕಣ್ಣು ಮುಖ ಹೇಗಿದೆ? ಬಣ್ಣ ಹೇಗಿದೆ? ಕೆಂಪಗಿದ್ದಾಳೆಯೆ? ಯಾರ ಹಾಗೆ ಇದ್ದಾಳೆ? ನಮ್ಮ ಲಲಿತೆಯಂತೆ ಇದ್ದಾಳೆಯೋ?” ಕೇಳಿದರು.

“ಲಲಿತಾ ನಸುಗಪ್ಪು. ಆದರೆ ಆ ಹುಡುಗಿ ಲಲಿತೆಗಿಂತಲೂ ಕೆಂಪಗಿದ್ದಾಳೆ. ಕಣ್ಣು ಮೂಗು ಮುಖ ಕಾಡು ಇಲ್ಲ.”

“ಹಾಗಾದರೆ ಮದುವೆಯನ್ನು ನಿಶ್ಚಯಮಾಡಲು ಅವರಿಗೆ ಹೇಳಲೋ?”

ಶೇಖರ ಮಾತನಾಡಲಿಲ್ಲ.

ಕ್ಷಣಹೊತ್ತು ಮಗನ ಮುಖವನ್ನು ನೋಡಿ "ಏನೋ ಶೇಖರ, ಹುಡುಗಿಗೆ ಓದುಬರಹ ಬರುತ್ತದೆಯೆ? ಎಲ್ಲಿಯ ವರೆಗೆ ಓದಿದ್ದಾಳೆ?" ಕೇಳಿದರು.

"ನಾನದನ್ನು ವಿಚಾರಿಸಲಿಲ್ಲವಮ್ಮಾ."

ಅತ್ಯಂತ ಆಶ್ಚರ್ಯದಿಂದ "ಏಕೆ ವಿಚಾರಿಸಲಿಲ್ಲ? ನಿನ್ನಂತಹ ಓದುಬರಹ ಬಲ್ಲ ಯುವಕರ ದೃಷ್ಟಿಯಿಂದ ಇದು ಅವಶ್ಯವಾಗಿ ಕೇಳ ಬೇಕಾದ ಪ್ರಶ್ನೆ. ಇದನ್ನೇ ಮರೆತು ಬಿಟ್ಟೆಯಾ?" ಎಂದರು.

"ಅಮ್ಮಾ, ನಿಜವಾಗಿಯೂ ಈ ವಿಚಾರವೇ ನನಗೆ ಹೊಳೆಯಲಿಲ್ಲ" ಎಂದು ನಕ್ಕ.

ಮಗನ ಈ ಮಾತು ಕೇಳಿ ತಾಯಿಗೆ ಮತ್ತಿಷ್ಟು ಆಶ್ಚರ್ಯ ವಾಯಿತು. ಮಗನ ಮುಖದ ಮೇಲಿನ ಭಾವವನ್ನು ಓದುತ್ತ "ಹಾಗಾ ದರೆ ಆ ಹುಡುಗಿಯನ್ನು ಮದುವೆಯಾಗುವ ಇಚ್ಛೆಯಿಲ್ಲವೆಂದು ಏಕೆ ಸ್ಪಷ್ಟವಾಗಿ ನುಡಿಯುವದಿಲ್ಲ?" ಎಂದರು.

ಶೇಖರ ಉತ್ತರವನ್ನೀಯಬೇಕೆನ್ನುವಷ್ಟರಲ್ಲಿ ಲಲಿತೆಯು ಅಲ್ಲಿಗೆ ಬಂದಳು. ಅವಳನ್ನು ನೋಡಿ ಅವನು ಸುಮ್ಮನಾದ. ಲಲಿತೆಯು ಮೆಲ್ಲ ಮೆಲ್ಲನೆ ಬಂದು ಭುವನೇಶ್ವರಿಯ ಹಿಂದೆ ನಿಂತಳು. ಅವರು ತಮ್ಮ ಎಡಗೈಯಿಂದ ಅವಳನ್ನು ಮುಂದಕ್ಕೆ ಎಳೆದು "ಏಕೆ ಮಗೂ?" ಎಂದು ಕೇಳಿದರು.

ಲಲಿತಾ ಕುಗ್ಗಿದ ದನಿಯಲ್ಲಿ "ಏನೂ ಇಲ್ಲಮ್ಮಾ" ಎಂದಳು.

ಮೊದಲು ಲಲಿತೆಯು ಭುವನೇಶ್ವರಿಯವರನ್ನು ಚಿಕ್ಕಮ್ಮ ಎಂದು ಕೂಗುತ್ತಿದ್ದಳು. "ನಾನು ನಿನ್ನ ಚಿಕ್ಕಮ್ಮನಲ್ಲ. ನಿನ್ನ ತಾಯಿ." ಎಂದು ಒಂದು ದಿನ ಭುವನೇಶ್ವರಿಯವರು ಹೇಳಿದ್ದರು. ಅಂದಿನಿಂದ ಅವರನ್ನು ಲಲಿತೆಯು 'ಅಮ್ಮಾ' ಎಂದೇ ಕೂಗುತ್ತಿದ್ದಳು. ಭುವನೇ ಶ್ವರಿಯವರು ಮತ್ತಿಷ್ಟು ಪ್ರೇಮದಿಂದ ಲಲಿತೆಯ ಮೈದಡವುತ್ತ

“ಕೇವಲ ನನ್ನನ್ನು ನೋಡುವದಕ್ಕೆ ಬಂದಂತೆ ತೋರುತ್ತೆ ಅಲ್ಲವೆ?” ಎಂದರು.

ಲಲಿತೆಯು ಸುಮ್ಮನಿದ್ದಳು.

“ನಿನ್ನನ್ನೇ ನೋಡುವದಕ್ಕೆ ಬಂದಿದ್ದಾಳೆ. ಆದರೆ ಅಮ್ಮಾ, ಲಲಿತೆಗೆ ಈವಾಗ ನಿನ್ನೊಡನೆ ಮಾತನಾಡಲು ಬಿಡುವೂ, ಸಿಕ್ಕುವದೇ ಇಲ್ಲ. ಅವಳು ಅಡಿಗೆಯನ್ನು ಮಾಡಬೇಕಾಗುತ್ತೆ ಮನೆಯಲ್ಲಿ.” ಶೇಖರನೆಂದ.

“ಅವಳಿಲ್ಲಿ ಅಡಿಗೆ ಮಾಡುತ್ತಾಳೊ?”

ಶೇಖರನು ಆಶ್ಚರ್ಯದಿಂದ “ಹಾಗಾದರೆ ಇವರ ಮನೆಯಲ್ಲಿ ಅಡಿಗೆಯನ್ನು ಯಾರು ಮಾಡುತ್ತಾರೆ? ಇನ್ನು ಮೇಲೆ ಲಲಿತೆಯೇ ಅಡಿಗೆ ಮಾಡುವಳೆಂದು ಅವತ್ತು ಗುರುಚರಣರು ನನಗೆ ಹೇಳಿದ್ದರು” ಎಂದ.

ತಾಯಿಯವರಿಗೆ ನಗು ಬಂತು. ನಗು ನಗುತ್ತ “ಇವಳ ಮಾವನ ಮಾತೋ, ಸರಿ, ಬಾಯಿಗೆ ಬಂದುದನ್ನು ಹೇಳಿಬಿಡುವರು. ಇವಳ ಮದಿವೆಯೇ ಇನ್ನೂ ಆಗಿಲ್ಲ. ಇವಳು ಮಾಡಿದ ಅಡಿಗೆಯನ್ನು ಆರು ಉಣ್ಣುವರು? * ನಾನು ನಮ್ಮ ಮಹಾರಾಜನನ್ನು †ಕಳಿಸಿ ಕೊಟ್ಟಿದ್ದೇನೆ. ಅವನೇ ಅವರ ಮನೆಯಲ್ಲಿ ಅಡಿಗೆ ಮಾಡುತ್ತಾನೆ. ನಮ್ಮ ಮನೆಯ ಅಡಿಗೆ ಯಾದರೂ ಎಷ್ಟು? ಹಿರಿಯ ಸೊಸೆ ಮಾಡುವಳು. ನಾನು ಇತ್ತೀತ್ತಲಾಗಿ ಲಲಿತೆಯ ಮನೆಯಲ್ಲಿಯೇ ಮಧ್ಯಾಹ್ನದ ಊಟ ಮಾಡುತ್ತಿದ್ದೇನೆ.” ಎಂದರು.

ತನ್ನ ಮಮತೆಯ ನಿಧಿಯಾದ ತಾಯಿಯೇ ಈ ಬಡ ಪರಿವಾರದ ದುಃಖವನ್ನು ದೂರ ಮಾಡುವದಕ್ಕೋಸ್ಕರ ಹೀಗೆ ಮಾಡಿರುವರೆಂದು

---

* ಬಂಗಾಲದಲ್ಲಿ ಕುಮಾರಿಯರು ಮಾಡಿದ ಅಡಿಗೆಯನ್ನು ಹಿರಿಯರು ಉಣ್ಣದಿರುವ ಪರಿಪಾಠವುಂಟು.

† ಬಂಗಾಲದಲ್ಲಿ ಮತ್ತು ಸಂಯುಕ್ತ ಪ್ರಾಂತದಲ್ಲಿ ಅಡಿಗೆಯವನಿಗೆ ‘ಮಹಾರಾಜ’ನೆಂದು ಕರೆಯುವರು.

ಆತನು ತೆಗೆದುಕೊಂಡ. ಇದರಿಂದ ಶೇಖರನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಸಂತೋಷ ಮತ್ತು ತೃಪ್ತಿಯದೊಂದು ನೀಳ ವಾದ ಉಸಿರನ್ನು ಬಿಟ್ಟು ಸುಮ್ಮನೆ ಕುಳಿತ.

ಒಂದು ತಿಂಗಳು ಕಳೆಯಿತು. ಸಾಯಂಕಾಲ ಮಂಚದ ಮೇಲೆ ಮಲಗಿಕೊಂಡು ಒಂದು ಇಂಗ್ಲೀಷ ಕಾದಂಬರಿಯನ್ನು ಓದುತ್ತಿದ್ದ- ಶೇಖರ. ಕಾದಂಬರಿಯಲ್ಲಿ ಆವನ ಮನಸ್ಸು ಅತ್ಯಂತ ಮಗ್ನವಾಗಿಬಿಟ್ಟಿತ್ತು. ಇದೇ ಕಾಲಕ್ಕೆ ಲಲಿತೆಯು ಬಂದು ದಿಂಬಿನ ಕೆಳಗಿದ್ದ ಖಜಾನೆಯ ಬೀಗದ ಕೈಯನ್ನು ತೆಗೆದುಕೊಂಡು ಶಬ್ದ ಮಾಡುತ್ತ ಖಜಾನೆಯನ್ನು ತೆರೆಯ ಲಾರಂಭಿಸಿದಳು. ಶೇಖರ ಪುಸ್ತಕದ ಕಡೆಗೇ ನೋಡುತ್ತ " ಯಾರವರು? ಏನದು ಶಬ್ದ? " ಎಂದ.

" ರೂಪಾಯಿ ತೆಗೆದುಕೊಳ್ಳುತ್ತಿದ್ದೇನೆ " ಎಂದಳು ಲಲಿತಾ.

" ಊಂ " ಎಂದು ಹಾಗೆಯೇ ಪುಸ್ತಕವನ್ನು ಓದಲಾರಂಭಿಸಿದ. ಲಲಿತೆಯು ಸೆರಗಿನಲ್ಲಿ ರೂಪಾಯಿಗಳನ್ನು ಕಟ್ಟಿಕೊಂಡು ಎದ್ದು ನಿಂತಳು. ಇವತ್ತು ಆವಳು ಇಲ್ಲಿಗೆ ಬರುವಾಗ ಸಿಂಗಾರ ಮಾಡಿಕೊಂಡು ಬಂದಿ ದ್ದಳು. ಒಂದು ಸಲ ಶೇಖರನು ತನ್ನ ಕಡೆ ನೋಡಬೇಕೆಂದು ಆವಳ ಮನದೊಳಗೆ ಗುಪ್ತವಾದ ಬಯಕೆ. " ಹತ್ತು ರೂಪಾಯಿಗಳನ್ನು ತೆಗೆದುಕೊಂಡಿದ್ದೇನೆ " ಎಂದಳು.

ಅವಳ ಕಡೆ ನೋಡದೆ " ಒಳ್ಳೇದು " ಎಂದು ಕಾದಂಬರಿಯನ್ನು ಓದತೊಡಗಿದ. ಅವನ ದೃಷ್ಟಿಯನ್ನು ತನ್ನ ಕಡೆಗೆ ಸೆಳೆದುಕೊಳ್ಳ ಬೇಕೆಂಬ ದೃಷ್ಟಿಯಿಂದ ಆವಳು ಅತ್ತಿಂದ ಇತ್ತ, ಇತ್ತಿಂದ ಅತ್ತ ಓಡಾ ಡುತ್ತ ಓರಣವಾಗಿಟ್ಟ ವಸ್ತುಗಳನ್ನೇ ಮತ್ತೆ ಮತ್ತೆ ಎತ್ತಿಎತ್ತಿ ಇಡ ಲಾರಂಭಿಸಿದಳು. ಅವಳ ಈ ಎಲ್ಲ ಉಪಾಯಗಳೂ ಜೋರ್ಗಲ್ಲ ಮೇಲೆ ಮಳೆಗರೆದಂತಾದುವು. ಮುಂಗಾಣದೆ ಮೆಲ್ಲ ಮೆಲ್ಲನೆ ಹೊರಟು ಹೋದಳು. ಸ್ವಲ್ಪ ದೂರ ಹೋಗಿ ಹೀಗೆಯೇ ಹಿಂತಿರುಗುವುದರಿಂದ ಏನು ಪ್ರಯೋ ಜನ? ಎಂದು ಯೋಚಿಸಿ ಪುನಃ ಹಿಂತಿರುಗಿ ಬಂದು ಬಾಗಿಲು ಬಳಿ ನಿಂತಳು.

ಇವತ್ತು ಅವಳು ತನ್ನ ಗೆಳತಿಯರೊಡನೆ ಸಿನೇಮಾ ನೋಡಲು ಹೋಗಬೇಕಾಗಿದೆ.

ಶೇಖರನ ಅಪ್ಪಣೆಯನ್ನು ಪಡೆದುಕೊಳ್ಳದೆ ಎಲ್ಲಿಗಾದರೂ ಹೋಗುವುದು ಶ್ರೇಯಸ್ಕರವಾದುದಲ್ಲವೆಂದು ಲಲಿತೆಯು ಚೆನ್ನಾಗಿ ಮನಗಂಡಿದ್ದಾಳೆ. ಇದನ್ನು ಯಾರೂ ಅವಳಿಗೆ ಹೇಳಿಕೊಟ್ಟಿದ್ದಿಲ್ಲ. ಶೇಖರನ ಅಪ್ಪಣೆಯನ್ನಾದರೂ ಏಕೆ ಪಡೆದುಕೊಳ್ಳಬೇಕೆಂಬ ಪ್ರಶ್ನೆಯೂ ಅವಳ ಮನಸದಲ್ಲಿ ಉದ್ಭವಿಸಿರಲಿಲ್ಲ. ಪ್ರಾಣಿಮಾತ್ರಕ್ಕೆಲ್ಲ ಸಹಜವಾದ ಸ್ವಾಭಾವಿಕವಾದ ಬುದ್ಧಿಯೊಂದುಂಟು. ಅದೇ ಬುದ್ಧಿಯು ಶೇಖರನ ಆಜ್ಞೆಯನ್ನು ಪಡೆದುಕೊಂಡೇ ಪ್ರತಿಯೊಂದು ಕಾರ್ಯವನ್ನು ಮಾಡೆಂದೂ, ಅದರಲ್ಲಿಯೇ ನಿನ್ನ ಕಲ್ಯಾಣವಿದೆಯೆಂದೂ ಹೇಳಿಕೊಟ್ಟಿತ್ತು. ಮನೆಯವರೆಲ್ಲರೂ ತಮ್ಮ ಮನಸ್ಸಿಗೆ ಬಂದ ಹಾಗೆ ಮಾಡಬಹುದು, ಆದರೆ ತಾನು ಮಾತ್ರ ಹಾಗೆ ಮಾಡುವುದು ಅನುಚಿತವು ಎಂದು ಅವಳ ಭಾವನೆ. ತಾನು ಸ್ವತಂತ್ರಳಿಲ್ಲವೆಂದೂ ಕೇವಲ ಅತ್ತೆ ಮಾವಂದಿರ ಅಪ್ಪಣೆಪಡೆದುಕೊಂಡರೆ ಸಾಲದೆಂದೂ ಅವಳು ಚೆನ್ನಾಗಿ ಅರಿತುಕೊಂಡಿದ್ದಳು.

ಆದುದರಿಂದಲೇ ಬಾಗಿಲ ಬಳಿ ಬಂದು ಮರೆಯಲ್ಲಿ ನಿಂತು ಮೆಲು ದನಿಯಲ್ಲಿ "ನಾವು ಸಿನೇಮಾ ನೋಡಲಿಕ್ಕೆ ಹೋಗುತ್ತೇವೆ" ಎಂದಳು.

ಲಲಿತೆಯು ಮೆಲುನುಡಿಯಲ್ಲಿ ಎಂದ ಈ ಶಬ್ದಗಳು ಶೇಖರನಿಗೆ ಕೇಳಿಸಲೇ ಇಲ್ಲ. ಆದುದರಿಂದ ಅವನು ಅವಳಿಗೆ ಉತ್ತರವನ್ನೀಯದೇ ತನ್ನ ಕಾದಂಬರಿ ವಾಚನದಲ್ಲಿ ತನ್ನನ್ನೇ ಮರೆತುಬಿಟ್ಟಿದ್ದ.

ಲಲಿತೆಯು ಮತ್ತೆ ದೊಡ್ಡ ದನಿಯಲ್ಲಿ "ಎಲ್ಲರೂ ನನ್ನ ದಾರೀ ಕಾಯುತ್ತಿರಬಹುದು" ಎಂದಳು.

ಈವಾಗ ಶೇಖರನಿಗೆ ಕೇಳಬಂತು. ಪುಸ್ತಕವನ್ನು ಒಂದು ಕಡೆ ಇಟ್ಟು ಕೇಳಿದ "ಏನು? ಏನಂತಿಯಾ?"

ಲಲಿತೆಯು ಸ್ವಲ್ಪ ಕೋಪಿಸಿಕೊಂಡು "ಈವಾಗ ಕೇಳಬಂತೆ?

ಇವತ್ತು ನಾವು ಸಿನೇಮಾ ನೋಡುವದಕ್ಕೆ ಹೋಗುತ್ತೇವೆ'' ಎಂದಳು.

"ನಾವು ಎಂದರೆ? ಯಾರು ಯಾರು?"

"ನಾನು, ಅನ್ನಾಕಾಲಿ, ಚಾರುಬಾಲಾ, ಅವಳ ತಮ್ಮ, ಅವಳ ಮಾವ—"

"ಅವಳ ಮಾವ ಯಾರು?"

"ಗಿರೀಂದ್ರಬಾಬು; ೫-೬ ದಿನಗಳಾದವು ಇಲ್ಲಿಗೆ ಬಂದು. ಮುಂಗೇರನಲ್ಲಿ ಅವರ ಮನೆ. ಕಲ್ಕತ್ತೆಯಲ್ಲಿ ಇದ್ದುಕೊಂಡು ಬಿ. ಎ. ಗೆ ಓದುತ್ತಿದ್ದಾರೆ. ಬಲು ಒಳ್ಳೇ ಮನುಷ್ಯರು—''

ಅವಳು ಮಾತು ಮುಗಿಸುವದಕ್ಕೆ ಮುಂಚೆಯೇ—" ಭಲೆ! ಹೆಸರು, ಕುಲ, ಗೋತ್ರ, ಧಂದೆ ಎಲ್ಲವನ್ನೂ ತಿಳಿದುಕೊಂಡೇ ಬಿಟ್ಟೆ! ಇಷ್ಟು ಸ್ವಲ್ಪ ದಿನಗಳಲ್ಲಿಯೆ ಇಷ್ಟು ಪರಿಚಯವಾಯಿತು. ಅಂತೆಯೇ ಈವಾಗ ನೀನು ೫-೬ ದಿನಗಳಿಂದ ಕಾಣುವದಿಲ್ಲ. ಇಸ್ಪೀಟು ಆಡುತ್ತಿರುವಂತೆ ತೋರುತ್ತೆ. ಅಹುದೊ ಅಲ್ಲವೊ?" ಎಂದು ಕೇಳಿದ ಶೇಖರ.

ಇಂತು ಅಕಸ್ಮಾತ್ ಶೇಖರನ ಮಾತಿನ ಒಲವು ಬದಲಾಗಿರುವದನ್ನು ನೋಡಿ ಲಲಿತೆಯು ಬೆದರಿದಳು. ಪರಿಸ್ಥಿತಿಯು ಇಲ್ಲಿಯವರೆಗೆ ಬರುವದೆನ್ನುವದು ಅವಳಿಗೆ ಎಳ್ಳಷ್ಟೂ ಎನಿಸಿರಲಿಲ್ಲ. ಅವಳು ಪ್ರತ್ಯುತ್ತರವನ್ನೀಯದೆ ಸ್ತಬ್ಧವಾಗಿ ನಿಂತುಬಿಟ್ಟಳು.

"ದಿನಾಲು ಇಸ್ಪೀಟಿನ ಆಟ ನಡೆಯುತ್ತೆ, ಅಲ್ಲವೆ?" ಎಂದು ಪುನಃ ಕೇಳಿದ ಶೇಖರ.

ಲಲಿತೆಯು ಸಂಕೋಚದಿಂದ ಕ್ಷೀಣ ಸ್ವರದಲ್ಲಿ "ಚಾರು ಹೇಳಿ—" ಎಂದು ನುಡಿದಳು.

"ಚಾರು ಹೇಳಿದ್ದರಿಂದ? ಏನು? ಏನು ಹೇಳಿದ್ದರಿಂದ?'' ಎನ್ನುತ್ತ ಒಂದು ಸಲ ಕತ್ತೆತ್ತಿ ಲಲಿತೆಯನ್ನು ನೋಡಿದ. "ಓಹೋ! ಅಲಂಕಾರ ಮಾಡಿಕೊಂಡೇ ಬಂದೀಯಾ. ಆಯಿತು, ಹೋಗು" ಎಂದ.

ಲಲಿತೆಯು ಹೋಗಲಿಲ್ಲ. ನಿಂತಲ್ಲಿಯೇ ಮಂತ್ರಮುಗ್ಧಳಂತೆ ನಿಂತುಬಿಟ್ಟಳು.

ಚಾರುಬಾಲೆಯ ಮನೆಯು ಲಲಿತೆಯ ಮನೆಯ ಹತ್ತಿರದಲ್ಲಿಯೇ ಇದೆ. ಚಾರುಬಾಲಾ ಲಲಿತೆಯ ಬಾಲ್ಯದ ಗೆಳತಿ. ಇರ್ವರಲ್ಲಿಯೂ ಒಂದು ತರದ ಸ್ನೇಹವು ಅಖಂಡವಾಗಿ ಬೆಳೆದುಹೋಗಿತ್ತು. ಆದುದ ರಿಂದಲೇ ಲಲಿತೆಯು ಚಾರುಬಾಲೆಯ ಮನೆಗೆ ಆಗಾಗ್ಗೆ ಹೋಗುತ್ತಿದ್ದಳು. ಚಾರುಬಾಲೆಯ ಮನೆಯವರು ಬ್ರಹ್ಮಸಮಾಜಕ್ಕೆ ಸೇರಿದವರು. ಗಿರೀಂದ್ರನೊಬ್ಬನನ್ನು ಬಿಟ್ಟು ಚಾರುವಿನ ಮನೆಯವರೆಲ್ಲರ ಪರಿಚಯವು ಶೇಖರನಿಗೆ ಉಂಟು. ೫-೬ ವರ್ಷಗಳ ಮೊದಲು ಒಂದು ಸಲ ಗಿರೀಂದ್ರನು ಆವುದೋ ಕೆಲಸಕ್ಕಾಗಿ ಕಲ್ಕತ್ತೆಗೆ ಬಂದು ಪುನಃ ಬಾಂಕೀಪುರಕ್ಕೆ ಹೋಗಿಬಿಟ್ಟದ್ದರಿಂದ ಗಿರೀಂದ್ರನ ಪರಿಚಯವು ಶೇಖರನಿಗೆ ಆಗಲಿಲ್ಲ. ಲಲಿತೆಯು ನಿಂತುಕೊಂಡಿರುವದನ್ನು ನೋಡಿ "ವ್ಯರ್ಥವಾಗಿ ಏಕೆ ನಿಂತುಕೊಂಡೆ? ಹೋಗು" ಎಂದು ಹೇಳಿ ಶೇಖರ ಪುನಃ ಪುಸ್ತಕವನ್ನು ಓದಲಾರಂಭಿಸಿದ.

ಐದು ನಿಮಿಷ ನಿಂತು ಮತ್ತೆ ಲಲಿತೆಯು "ಹೋಗಲೊ?" ಎಂದು ಮೆಲ್ಲನೆ ಕೇಳಿದಳು.

"ಒಂದು ಸಲ ಹೇಳಲಿಲ್ಲವೆ ಲಲಿತಾ, ಹೋಗು ಅಂತಾ" ಎಂದು ಸ್ವಲ್ಪ ಬಿರುಸಾಗಿ ನುಡಿದ ಶೇಖರ.

ಶೇಖರನು ಈ ರೀತಿ ಮಾತನಾಡಲಾರಂಭಿಸಿದ್ದರಿಂದ ಸಿನೇಮಾಕ್ಕೆ ಹೋಗುವ ಲಲಿತೆಯ ಉತ್ಸಾಹ ಕುಗ್ಗಿತು. ಆದರೆ, ಸಿನೇಮಾಕ್ಕೆ ಹೋಗದೆ ಬಿಡುವಂತಿಲ್ಲ; ಚಾರುಬಾಲೆಯ ಒತ್ತಾಯ. ಲಲಿತೆ ವಿಕಟಪರಿಸ್ಥಿತಿಯಲ್ಲಿ ಸಿಲುಕಿ ಗಾಸಿಯಾಗುತ್ತಿದ್ದಳು.

ಅರ್ಧ ಖರ್ಚು ಚಾರುಬಾಲೆಯ ಮಾವನು ಕೊಡಬೇಕೆಂದೂ, ಅರ್ಧ ಖರ್ಚು ಲಲಿತೆಯು ಕೊಡಬೇಕೆಂದೂ ಮೊದಲೇ ಮಾತುಕತೆಯಾಗಿತ್ತು.

ಚಾರುಬಾಲೆಯ ಮನೆಯಲ್ಲಿ ಎಲ್ಲರೂ ತನ್ನ ಪ್ರತೀಕ್ಷೆ ಮಾಡುತ್ತಿರಬಹುದು. ನಾನು ತಡಮಾಡುತ್ತಿರುವದರಿಂದ ಎಲ್ಲರೂ ಬೇಜಾರಪಡುತ್ತಿರಬಹುದು. ಎಷ್ಟೆಷ್ಟು ತಡವಾಗುತ್ತಿದೆಯೋ ಅಷ್ಟಷ್ಟೂ ಅವರ

ಬೇಜಾರ ಹೆಚ್ಚುತ್ತಿರಬಹುದು.—ಈ ತರದ ನೋಟವು ಲಲಿತೆಯ ಕಲ್ಪನಾಚಕ್ಷುಗಳ ಸಮ್ಮುಖದಲ್ಲಿ ಸುಳಿದಾಡಲಾರಂಭಿಸಿತು. ಇದರಿಂದ ಪಾರಾಗುವ ಉಪಾಯವೂ ತೋಚಲೊಲ್ಲದು. ಮತ್ತೆ ೨-೩ ನಿಮಿಷ ಸುಮ್ಮನೆ ನಿಂತು "ಇವತ್ತು ಒಂದು ದಿನ ಹೋಗಬಯಸುವೆ. ಇನ್ನು ಮುಂದೆ ಪುನಃ ಹೋಗುವದಿಲ್ಲ. ಹೋಗಲೋ?" ಎಂದಳು.

ಶೇಖರನು ಪುಸ್ತಕವನ್ನು ಒಂದೆಡೆ ಬಿಸುಟ ಬೆದರಿಸಿ ನುಡಿದ "ತೊಂದರೆ ಕೊಡಬೇಡ ಹೋಗು. ಹೋಗುವ ಇಚ್ಛೆ ಇದ್ದರೆ ಹೋಗು. ನಾನೆಷ್ಟರವನು ನಿನಗೆ ಬೇಡವೆನ್ನುವದಕ್ಕೆ? ಒಳಿತುಕೆಡಕನ್ನು ಅರಿತುಕೊಳ್ಳುವಷ್ಟು ನೀನು ದೊಡ್ಡವಳಾಗಿದ್ದೀಯಾ."

ಈ ಬಿರುನುಡಿಗಳನ್ನು ಕೇಳಿ ಲಲಿತೆಯು ನಡುಗಿದಳು. ಲಲಿತೆಯನ್ನು ಶೇಖರನು ಆಗಾಗ್ಗೆ ಬೆದರಿಸುತ್ತಲೇ ಇದ್ದ. ಇಷ್ಟೇ ಅಲ್ಲ ಚೆನ್ನಾಗಿ ಪೀಡಿಸುತ್ತಿದ್ದ, ಬೈಯುತ್ತಿದ್ದ. ಇವತ್ತೇ ಅವನು ಇಷ್ಟು ಬೆದರಿಸಿದ್ದು, ಹೀಗೇನೂ ಅಲ್ಲ. ಇದನ್ನೆಲ್ಲ ಕೇಳಿ ಸಹಿಸುವಷ್ಟು ಅಭ್ಯಾಸ ಅವಳಿಗೆ ಮೊದಲಿನಿಂದಲೇ ಇತ್ತು. ಆದರೆ ಈಗೆರಡು ವರ್ಷಗಳಿಂದ ಇಷ್ಟು ಭಯಂಕರವಾಗಿ ಬೆದರಿಸಿಕೊಳ್ಳುವ ಪ್ರಸಂಗ ಬಂದಿರಲಿಲ್ಲ. ಅತ್ತ ಗೆಳತಿಯರು ತನ್ನ ದಾರೀ ಕಾಯುತ್ತಿದ್ದಾರೆ. ಸೀರೆಯನ್ನುಟ್ಟುಕೊಂಡು ಸಿದ್ಧಳಾಗಿ ಬಂದದ್ದೇ ಒಂದು ತಪ್ಪಾಯಿತು. ಈವಾಗ ಅವಳು ಸಖಿಯರಿಗೆ ಕೇಳಿದರೆ ಏನು ಹೇಳಬೇಕು?

ಇಂದಿನವರೆಗೆ ಬೇಕಾದಲ್ಲಿಗೆ ಹೋಗಿಬರಲು ಲಲಿತೆಗೆ ಸ್ವಾತಂತ್ರ್ಯವಿತ್ತು. ಎಲ್ಲಿಗೆ ಹೋಗಲೂ ಅವಳನ್ನು ಶೇಖರ ತಡೆಯುತ್ತಿರಲಿಲ್ಲ. ಇದೇ ವಿಚಾರದಿಂದ ಅವಳು ಸೀರೆಯನ್ನುಟ್ಟು ಅಲಂಕಾರಗಳನ್ನು ಧರಿಸಿಕೊಂಡು ಸಮಯಕ್ಕೆ ಸರಿಯಾಗಿ ರೂಪಾಯಿಗಳನ್ನು ತೆಗೆದುಕೊಂಡು ಹೋಗಲು ಬಂದಿದ್ದಳು.

ಶೇಖರನ ಇಂದಿನ ವರ್ತನೆಯಿಂದ ಅವಳ ಸ್ವಾತಂತ್ರ್ಯಕ್ಕೆ ನಷ್ಟವೇನೂ ಆಗಲಿಲ್ಲ. ಒಂದು ತುಚ್ಛಕಾರಣದಿಂದ ತನ್ನ ಸ್ವಾತಂತ್ರ್ಯಕ್ಕೆ ಕುಂದು ತಗಲಿತೆಂದು ಅವಳಿಗೆ ಅತ್ಯಂತ ವ್ಯಥೆಯಾಯಿತು, ನಾಚಿಕೆ

ಯಾಯಿತು. ಬೆಳೆದು ಇಷ್ಟು ದೊಡ್ಡವಳು ಆಗಿದ್ದರೂ ಈ ರೀತಿಯಾದ ವ್ಯಥೆಯನ್ನು ಅನುಭವಿಸಿದುದು ಇದೇ ಮೊದಲು. ಅಭಿಮಾನದಿಂದ ಕಂಣುಗಳಲ್ಲಿ ಕಂಬನಿಗಳನ್ನು ತುಂಬಿಕೊಂಡು ಅವಳು ಮತ್ತೆ ಐದು ನಿಮಿಷಗಳವರೆಗೆ ನಿಂತಳು. ಬಳಿಕ ಮನೆಗೆ ಹೋಗಿ, ಅನ್ನಾಕಾಲಿಯ ಕೈಯಲ್ಲಿ ಹತ್ತು ರೂಪಾಯಿಗಳನ್ನು ಕೊಟ್ಟು ಹೇಳಿದಳು—"ಕಾಲೀ, ಇವತ್ತು ನೀವೆಲ್ಲರೂ ಹೋಗಿ ನೋಡಿಕೊಂಡು ಬನ್ನಿ. ಮೈಯಲ್ಲಿ ಸರಿಯಾಗಿಲ್ಲ. ಆದುದರಿಂದ ನಾನು ಬರುವದಿಲ್ಲವೆಂದು ಚಾರುಬಾಲೆಗೆ ಹೇಳು."

ಅನ್ನಾಕಾಲಿಯು "ಮೈಯಲ್ಲಿ ಸರಿಯಾಗಿಲ್ಲವೆ? ಏನಾಗಿದೆ?" ಎಂದು ಕೇಳಿದಳು.

"ವಿಪರೀತ ತಲೆನೋವು. ಮನಸ್ಸಿನಲ್ಲಿಯೂ ಸಂತೋಷವಿಲ್ಲ. ಆರೋಗ್ಯವು ದಿನದಿನಕ್ಕೆ ಕೆಡುತ್ತಲಿದೆ" ಎಂದು ಮಲಗಿದ್ದಳು. ಚಾರುಬಾಲೆಯು ಬಂದಳು; ದಮ್ಮಯ್ಯ ಎಂದಳು; ಒತ್ತಾಯಪಡಿಸಿದಳು; ಅತ್ತೆಯವರಿಂದ ಅಪ್ಪಣೆ ಕೊಡಿಸಿದಳು. ಏನು ಮಾಡಿದರೂ ಲಲಿತೆಯನ್ನು ಎಬ್ಬಿಸಿ ಸಿನೇಮಾಕ್ಕೆ ಕರೆದುಕೊಂಡು ಹೋಗುವದು ಆಗಲಿಲ್ಲ. ಹತ್ತು ರೂಪಾಯಿಗಳು ಕೈಗೆ ಬಂದದ್ದರಿಂದ ಅನ್ನಾಕಾಲಿಯ ಮನಸ್ಸು ಥಿಯೇಟರಿನ ಕಡೆಗೆ ಬಲವಾಗಿ ಹರಿಯುತ್ತಿತ್ತು. ಆದುದರಿಂದ ಇಂದಿನ ಕಾರ್ಯಕ್ರಮವು ನಿಂತುಹೋಗಬಾರದೆಂದು ಅವಳು ಚಾರುಬಾಲೆಯನ್ನು ಒಂದುಕಡೆ ಕರೆದು ಹತ್ತು ರೂಪಾಯಿಗಳನ್ನು ತೋರಿಸಿ "ಲಲಿತೆಯ ಮೈಯಲ್ಲಿ ಸರಿಯಾಗಿಲ್ಲ. ಆದುದರಿಂದ ವ್ಯರ್ಥವಾಗಿ ಅವಳಿಗೆ ತೊಂದರೆ ಕೊಡಬೇಡ; ಅವಳು ಬರಲಾರಳು. ಅವಳು ಬರದೆಹೋದರೆ ಏನಾಯಿತು? ಹತ್ತು ರೂಪಾಯಿಗಳನ್ನಂತೂ ಮೊದಲು ಮಾತನಾಡಿದಂತೆ ಕೊಟ್ಟುಬಿಟ್ಟಿದ್ದಾಳೆ, ಇಗೊ ನೋಡು; ಬಾ, ನಾವು ಹೋಗೋಣ" ಎಂದಳು.

ಅನ್ನಾಕಾಲಿಯು ಚಿಕ್ಕವಳಾದರೂ ಬುದ್ಧಿ ಅತ್ಯಂತ ಚುರುಕಾಗಿದೆಯೆಂಬುದನ್ನು ಇಂದು ಚಾರುಬಾಲೆಯು ಅರಿತುಕೊಂಡಳು. ಅನ್ನಾ

ಕಾಲಿಯ ಮಾತಿಗೆ ಒಪ್ಪಿಕೊಂಡು, ಅವಳನ್ನು ಜೊತೆಗೆ ಕರೆದುಕೊಂಡ ಹೊರಟುಹೋದಳು.

೩

ಚಾರುಬಾಲೆಯ ತಾಯಿ ಮನೋರಮೆ. ಅವಳಿಗೆ ಇಸ್ಪೀಟು ಆಟದ ಮೇಲೆ ಬಲು ಪ್ರೀತಿ. ಪ್ರೀತಿಯಿದ್ದಷ್ಟು ಆಟದಲ್ಲಿ ಅವಳಿಗೆ ನೈಪುಣ್ಯವಿರಲಿಲ್ಲ. ಲಲಿತೆಯು ಈ ಕೊರತೆಯನ್ನು ಪೂರೈಸುತ್ತಿದ್ದಳು. ಇಸ್ಪೀಟಿನ ಆಟದಲ್ಲಿ ಲಲಿತೆಗೆ ನೈಪುಣ್ಯವಿದ್ದಷ್ಟು ಮತ್ತಾರಿಗೂ ಇರಲಿಲ್ಲ. ಮನೋರಮೆಯ ಸೋದರಮಾವನ ಮಗ ಗಿರೀಂದ್ರ ಬಂದಾಗಿನಿಂದು ದಿನಾಲು ಇಸ್ಪೀಟಿನ ಆಟ ನಡೆಯುತ್ತಿದೆ. ಗಿರೀಂದ್ರ ಎಷ್ಟಾದರೂ ಪುರುಷ, ಆಟವನ್ನೂ ಚೆನ್ನಾಗಿ ಆಡುತ್ತಿದ್ದ. ಆದುದರಿಂದ ಆತನ ಸಂಗಡ ಆಡು ವಾಗ ಮನೋರಮೆಯು ಯಾವಾಗಲೂ ತನ್ನ ಪಕ್ಷಕ್ಕೆ ಲಲಿತೆಯನ್ನು ಕರೆದುಕೊಂಡು ಆಡುತ್ತಿದ್ದಳು.

ಸಿನೇಮಾಕ್ಕೆ ಹೋಗಿ ಬಂದ ಮರುದಿನ ಲಲಿತೆಯು ಸಮಯಕ್ಕೆ ಸರಿಯಾಗಿ ಹೋಗಲಿಲ್ಲ. ಆದುದರಿಂದ ಮನೋರಮೆಯು ಅವ ಳನ್ನು ಕರೆತರಲು ತನ್ನ ದಾಸಿಯನ್ನು ಕಳುಹಿದಳು. ಆಗ ಲಲಿತೆಯು ಇಂಗ್ಲೀಷಿನಿಂದ ಬಂಗಾಲಿಗೆ ಏನೋ ಒಂದನ್ನು ಅನುವಾದ ಮಾಡುತ್ತ ಕುಳಿತಿದ್ದಳು. ಇಸ್ಪೀಟಿನ ಆಟಕ್ಕೆ ಹೋಗಲಿಲ್ಲ.

ಲಲಿತೆಯ ಸಖಿ ಚಾರುಬಾಲೆಯು ಕರೆಯಲು ಬಂದಳು. ಆದರೂ ಅವಳು ಕುಳಿತ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಆ ಮೇಲೆ ಮನೋ ರಮೆಯೇ ಬಂದು ನೋಟಬುಕ್ಕನ್ನು ಒಂದೆಡೆ ಎಸೆದು "ಸಾಕೇಳು, ನಡೆ ಬೇಗ. ಪರೀಕ್ಷೆ ಕೊಟ್ಟು ನೀನೇನು ಜಡ್ಜಿಯ ಕೆಲಸ ಮಾಡಬೇಕಾದ್ದು ದಿಲ್ಲ. ಇಸ್ಪೀಟೇ ಆಡಬೇಕಾಗುವದು, ನಡೆ" ಎಂದಳು.

ಲಲಿತೆಯು ಉಭಯಸಂಕಟದಲ್ಲಿ ಬಿದ್ದಳು. ರೋದನದ ದನಿ ಯಿಂದ ತಾನು ಬರಲಾರೆನೆಂದು ಹೇಳಿದಳು. ಇವತ್ತು ಏನು ಮಾಡಿದರೂ ಸಾವಿರಾರು ಹೊನ್ನು ಕೊಟ್ಟರೂ ಬರಲಾರೆ, ನಾಳೆ ಅವಶ್ಯವಾಗಿ ಬರುವೆ ನೆಂದು ರಾಮವಚನವನ್ನಿತ್ತಳು. ಆದರೆ ಮನೋರಮೆಯು ಒಂದನ್ನೂ

ಕೇಳಲಿಲ್ಲ. ಅತ್ತೆಗೆ ಹೇಳಿ ಬಲಾತ್ಕಾರದಿಂದ ಕೈಹಿಡಿದು ಎಬ್ಬಿಸಿದಳು. ಬಳಿಕ ನಿರುಪಾಯದಿಂದ ಲಲಿತೆಯು ಹೋದಳು. ದಿನದಂತೆ ಗಿರೀಂದ್ರನ ವಿರುದ್ಧ ಪಕ್ಷದಲ್ಲಿ ಕುಳಿತು ಆಟವನ್ನು ಪ್ರಾರಂಭಿಸಿದಳು. ಆದರೆ ಇವತ್ತು ಆಟಕ್ಕೆ ಕಳೆ ಏರಲಿಲ್ಲ. ಆಟವನ್ನು ಹೂಡಿದಾಗಿನಿಂದಲೇ ಅವಳು ಅತ್ಯಂತ ಉದಾಸಳಾಗಿದ್ದಳು. ಅಲ್ಲದೆ ಆಟ ಮುಗಿಯುವದಕ್ಕೆ ಮುಂಚೆಯೇ ಮನೆಗೆ ಹೊರಡಲು ಸಿದ್ಧಳಾದಳು. "ನೀವು ನಿನ್ನೆ ರೂಪಾಯಿಗಳನ್ನು ಮಾತ್ರ ಕಳಿಸಿಕೊಟ್ಟಿರಿ. ಸಿನೇಮಾಕ್ಕೆ ಬರಲೇ ಇಲ್ಲ. ನಾಳೆ ಬನ್ನಿ, ಮತ್ತೆ ಹೋಗೋಣ" ಎಂದ ಗಿರೀಂದ್ರ.

"ಇಲ್ಲ—ನನ್ನ ಆರೋಗ್ಯ ಸರಿಯಾಗಿಲ್ಲ. ನಿನ್ನೆ ದಿನ ವಿಪರೀತ ತಲೆನೋವು" ಎಂದು ಮೆಲ್ಲಗೆ ಲಲಿತೆಯು ನುಡಿದಳು.

ಗಿರೀಂದ್ರನು ನಗುತ್ತ "ಆದರೆ ಈವಾಗ ನಿಮ್ಮ ಆರೋಗ್ಯ ಸರಿಯಾಗಿದೆಯಲ್ಲವೆ ? ಪುನಃ ನಾಳೆ ಸಿನೇಮಾಕ್ಕೆ ಹೋಗಬೇಕೆಂದು ನನ್ನ ಮತ. ನಾಳೆ ನೀವು ಬರಲೇಬೇಕು" ಎಂದ.

"ಬರೋಕೆ ಆಗುವದಿಲ್ಲ. ಇಲ್ಲ. ನಾಳೆ ನನಗೆ ಬಿಡುವೇ ಇಲ್ಲ" ಎಂದವಳೇ ಭರದಿಂದ ಲಲಿತೆಯು ಹೋಗಿಬಿಟ್ಟಳು.

ಆಟದೊಳಗಿನ ಇಂದಿನ ಅನಾಸಕ್ತಿಗೆ ಶೇಖರನ ಬೆದರಿಕೆಯೇ ಕಾರಣವೆಂದು ಹೇಳಲಾಗುವದಿಲ್ಲ. ಆದರೆ ಗಿರೀಂದ್ರನ ಸಂಗಡ ಆಡುವದಕ್ಕೆ ಅವಳಿಗೆ ಸಂಕೋಚ, ನಾಚಿಕೆಯಾಗುತ್ತಿತ್ತು.

ಶೇಖರನ ಮನೆಗೆ ಹೋಗಿಬರುವಂತೆ ಚಾರುಬಾಲೆಯ ಮನೆಗೂ ಲಲಿತೆಯು ಹೋಗಿಬರುತ್ತಿದ್ದಳು. ಮತ್ತು ತನ್ನ ಮನೆಯವರ ಎದುರಿಗೆ ನಿರ್ಭಯವಾಗಿ ಕುಳಿತುಕೊಳ್ಳುವಂತೆ ಚಾರುಬಾಲೆಯ ಮನೆಯವರ ಮುಂದೆಯೂ ಕುಳಿತುಕೊಳ್ಳುತ್ತಿದ್ದಳು ಎನ್ನುವದು ಪಾಠಕರಿಗೆ ಪರಿಚಿತವಿದ್ದ ವಿಷಯ. ಇದೇ ಕಾರಣದಿಂದ ಅವಳು ಗಿರೀಂದ್ರನ ಎದುರಿಗೆ ಮುಖದ ಮೇಲೆ ಮುಸುಕುಹಾಕಿಕೊಂಡು ಕುಳಿತುಕೊಳ್ಳಲಿಲ್ಲ; ಮತ್ತು ಅವನೊಡನೆ ಮಾತನಾಡಲು ಸಂಕೋಚಪಟ್ಟುಕೊಳ್ಳಲಿಲ್ಲ; ಆದರೆ ಇವತ್ತು ಆಡುವ ಸಮಯದಲ್ಲಿ ಇಷ್ಟು ಅಲ್ಪ ಪರಿಚಯದಿಂದ, ಇಷ್ಟು

ಸ್ವಲ್ಪ ದಿನಗಳ ಸ್ನೇಹದಿಂದ ಗಿರೀಂದ್ರನು ತನ್ನನ್ನು ಪ್ರೇಮದ ನೋಟ ದಿಂದ ನೋಡುತ್ತಿದ್ದಾನೆಂಬುದು ಅವಳಿಗೆ ಹೇಗೆ ಗೊತ್ತಾಯಿತೋ ಏನೋ. ಪುರುಷರ ಪ್ರೀತಿಪೂರ್ಣವಾದ ದೃಷ್ಟಿಯು ಇಷ್ಟು ನಾಚಿಕೆ ಯನ್ನು ಹುಟ್ಟಿಸಬಹುದೆಂಬುದರ ಕಲ್ಪನೆಯು ಅವಳಿಗೆ ಇರಲಿಲ್ಲ.

ಮೊದಲು ತನ್ನ ಮನೆಗೆ ಹೋಗಿ, ಅಲ್ಲಿ ಒಂದೆರೆನಿಮಿಷ ಮಿಂಚಿ ನಂತೆ ನಿಂತು, ಶೇಖರನ ಮನೆಗೆ ಬಂದು ಅವನ ರೂಮಿಗೆ ಹೋದಳು. ಚಿಕ್ಕಂದಿನಿಂದಲೇ ಅವಳು ಮನೆಯ ಸ್ವಚ್ಛತೆಯ ಭಾರವನ್ನೆಲ್ಲ ಹೊತ್ತು ಕೊಂಡುಬಿಟ್ಟಿದ್ದಳು. ಆದರೆ ಶೇಖರನ ರೂಮಿನಲ್ಲಿಯ ಸ್ವಚ್ಛತೆಯ ಕಾರ್ಯವನ್ನು ತಾನೇ ಸ್ವತಃ ಮಾಡುತ್ತಿದ್ದಳು. ಮೇಜಿನ ಮೇಲೆ ಪುಸ್ತಕಗಳನ್ನು ನೀಟಾಗಿಟ್ಟು, ಮಸಿಕುಡಿಕೆ-ಲೆಕ್ಕಣಿಕೆಗಳನ್ನು ಚೆನ್ನಾಗಿ ಒರಸಿ ಸುಂದರವಾಗಿ ಕಾಣುವಂತೆ ಮಂಡಿಸುತ್ತಿದ್ದಳು. ಅವಳ ಹೊರತು ಈ ರೂಮಿನ ಸ್ವಚ್ಛತೆಯ ಕಡೆಗೆ ಯಾರೂ ಲಕ್ಷಗೊಡುತ್ತಿರಲಿಲ್ಲ. ಇತ್ತ ಐದಾರು ದಿನಗಳಿಂದ ಈ ಕಾರ್ಯವನ್ನು ಮಾಡದೇ ಇದ್ದುದರಿಂದ ಕಾರ್ಯವು ವಿಪರೀತವಾಗಿ ಬೆಳೆದುಹೋಗಿತ್ತು. ಆದುದರಿಂದಲೇ ಶೇಖರನು ಆಫೀಸಿನಿಂದ ಬರುವ ಮೊದಲೇ ಸರ್ವಕಾರ್ಯವನ್ನೂ ಮುಗಿಸಿಹೋಗಬೇಕೆಂದು ಈ ರೂಮಿಗೆ ಬಂದು ಕಾರ್ಯಕ್ಕೆ ಕೈಹಾಕಿ ದಳು.

ಲಲಿತೆಯು ಭುವನೇಶ್ವರಿಯನ್ನು 'ಅಮ್ಮಾ' ಎಂದು ಕರೆಯುತ್ತಿ ದ್ದಳು. ಬಿಡುವು ದೊರೆತಾಗ ಅವರ ಹತ್ತಿರವೇ ಬಂದು ಅವರೊಡ ನೆಯೇ ಮಾತನಾಡುತ್ತ ಸಮಯವನ್ನು ಕಳೆಯುತ್ತಿದ್ದಳು. ಅವಳು ಭುವನೇಶ್ವರೀದೇವಿಯವರು ಪರರು ಎಂದು ಭಾವಿಸುತ್ತಿರಲಿಲ್ಲ. ಅದ ರಂತೆಯೇ ಅವರೂ ಲಲಿತೆಯನ್ನು ತಮ್ಮ ಮಗಳೆಂದು ತಿಳಿದು ಅವಳನ್ನು ರಕ್ಷಿಸುತ್ತಿದ್ದರು. ಎಂಟು ವರ್ಷದವಳು ಇದ್ದಾಗಲೇ ಲಲಿತೆಯ ತಾಯಿ ತೀರಿಕೊಂಡಳು. ಅವಳು ಮಾವನ ಮನೆಯಲ್ಲಿ ಬಂದು ಇರಬೇಕಾ ಯಿತು. ಅಂದಿನಿಂದಲೇ ಅವಳು ಶೇಖರನ ಮನೆಗೆ ಬಂದು, ಸಹೋದರಿ ಯಂತೆ ಅವನಿಂದ ಪಾಠಹೇಳಿಸಿಕೊಂಡು ಇಂದು ಇಷ್ಟು ದೊಡ್ಡವಳಾಗಿ

ದ್ದಾಳೆ. ಲಲಿತೆಯ ಮೇಲೆ ಶೇಖರನ ಸ್ನೇಹವಿದೆಯೆಂದು ಎಲ್ಲರೂ ಬಲ್ಲರು. ಆದರೆ ಆ ಸ್ನೇಹವು ಇಲ್ಲಿಯ ವರೆಗೆ ಬೆಳೆದು ಪರವಾಗಿ ಫಲಿಸುವದರಲ್ಲಿದೆ ಎನ್ನುವದು ಆರಿಗೂ ಗೊತ್ತಿರಲಿಲ್ಲ. ಶೇಖರನಂತೆಯೇ ಎಲ್ಲರೂ ಲಲಿತೆಯನ್ನು ಆದರದಿಂದಲೂ ಪ್ರೀತಿಯಿಂದಲೂ ಸಂರಕ್ಷಿಸುತ್ತಿದ್ದರು. ಯಾರಿಗೂ ಅವಳಲ್ಲಿ ಯಾವ ತರದ ದೋಷವೂ ಕಂಡುಬರಲಿಲ್ಲ. ಅದೇ ರೀತಿಯಾಗಿ ಸರ್ವರ ದೃಷ್ಟಿಯನ್ನು ಆಕರ್ಷಿಸುವಂತಹ ಲಲಿತೆಗೆ ಸಂಬಂಧಪಟ್ಟ ವಿಷಯವು ಶೇಖರನಲ್ಲಿಯೂ ಕಾಣಲಿಲ್ಲ. ಒಂದಿಲ್ಲೊಂದು ದಿನ ಈ ಮನೆಯಲ್ಲಿ ಸೊಸೆಯಾಗಿ ಸ್ಥಾನವನ್ನು ಲಲಿತೆಯು ಪಡೆಯಬಹುದೆಂಬ ಕಲ್ಪನೆಯು ಯಾರಿಗೂ ಬರಲಿಲ್ಲ. ಈ ತರದ ಕಲ್ಪನೆಯು ಲಲಿತೆಯ ಮನೆಯವರಿಗೂ ಬರಲಿಲ್ಲ, ಭುವನೇಶ್ವರೀದೇವಿಯವರಿಗೂ ಬರಲಿಲ್ಲ.

ಶೇಖರನು ಬರುವದಕ್ಕೆ ಮುಂಚಿತವಾಗಿಯೇ ಕೆಲಸವನ್ನು ಮುಗಿಸಿ ಹೋಗುವೆನೆಂದು ಲಲಿತೆ ಭಾವಿಸಿದ್ದಳು. ಆದರೆ ಚಿತ್ತವು ಚಂಚಲವಾಗಿದ್ದುದರಿಂದ ಗಡಿಯಾರದ ಕಡೆಗೆ ದೃಷ್ಟಿಯೇ ಹೋಗಲಿಲ್ಲ. ತಡವಾಗಿ ಹೋಯಿತು. ಬಾಗಿಲ ಬಳಿ ಮೆಟ್ಟುಗಳ ಶಬ್ದ ಕೇಳಿಸಿತು. ಕತ್ತೆತ್ತಿಕೊಂಡು ಲಗುಬಗೆಯಿಂದ ಎದ್ದು ನಿಂತಳು.

ಒಳಕ್ಕೆ ಬಂದು ಒಂದು ಮೂಲೆಯಲ್ಲ ಲಲಿತೆಯು ನಿಂತಿರುವದನ್ನು ನೋಡಿ ಶೇಖರ "ಓಹೋ, ನೀನೇ ? ಸರಿ. ರಾತ್ರಿ ಎಷ್ಟು ಗಂಟೆಗೆ ಸಿನೇಮಾದಿಂದ ಹಿಂತಿರುಗಿದೆ ? " ಎಂದ.

ಲಲಿತೆಯು ಮಾತನಾಡಲಿಲ್ಲ.

ಸ್ಪ್ರಿಂಗಿನ ಸೀಟಿನ ಆರಾಮುಕುರ್ಚಿಯ ಮೇಲೆ ಕುಳಿತು ಕೈಕಾಲುಗಳನ್ನು ಚಾಚಿ ಅದೇ ಪ್ರಶ್ನೆಯನ್ನು ಪುನಃ ಕೇಳಿದ "ಎಷ್ಟು ಗಂಟ್ಯಾಗಿತ್ತು ಹಿಂತಿರುಗಿದಾಗ ? ಎರಡೊ ಮೂರೊ? ಏಕೇ, ಮಾತನ್ನೇ ಆಡೋದಿಲ್ಲ. ಬಾಯಿಂದ ಶಬ್ದಗಳು ಹೊರಡಲಾರವೆ ? "

ಲಲಿತೆಯು ಸುಮ್ಮನೇ ಇದ್ದಳು.

"ಹೋಗು ಕೆಳಗೆ. ಅಮ್ಮ ಕರೆಯುತ್ತಿದ್ದಾಳೆ" ಎಂದು ಸಲ್ಪ

ಕ್ರೋಧದಿಂದ ಸುಡಿದ ಶೇಖರ.

ಅಡಿಗೆಯ ಮನೆಯ ಎದುರಿನಲ್ಲಿ ಕುಳಿತು ಭುವನೇಶ್ವರೀದೇವಿಯವರು ತಟ್ಟೆಯಲ್ಲಿ ತಿಂಡಿಯ ಸಾಮಾನುಗಳನ್ನು ಇಡುತ್ತಿದ್ದರು. ಲಲಿತೆಯು ಹತ್ತಿರ ಹೋಗಿ "ಅಮ್ಮಾ, ನನ್ನನ್ನು ಕೂಗುತ್ತಿದ್ದಿರೋ ?" ಎಂದು ಕೇಳಿದಳು.

"ಇಲ್ಲ. ನಾನು ಕೂಗಲಿಲ್ಲವಲ್ಲ ?" ಎಂದು ಲಲಿತೆಯ ಮುಖವನ್ನು ನೋಡಿ "ಮಗೂ, ನಿನ್ನ ಮುಖ ಇಷ್ಟೇಕೆ ಬಾಡಿದೆ ? ಈವರೆಗೂ ಊಟಮಾಡಲಿಲ್ಲವೆ ?" ಎಂದರು.

ಲಲಿತೆಯು ಕತ್ತನ್ನಲ್ಲಾಡಿಸಿದಳು.

"ಇಗೋ, ಈ ತಿಂಡಿಗಳನ್ನು ಶೇಖರಣ್ಣನಿಗೆ ಕೊಟ್ಟು ಬೇಗನೇ ನನ್ನೆಡೆಗೆ ಬಾ, ಹೋಗು."

ಲಲಿತೆಯು ಸ್ವಲ್ಪ ಸಮಯದ ನಂತರ ಮಿಠಾಯಿಗಳನ್ನು ತೆಗೆದುಕೊಂಡು ಬಂದು, ಶೇಖರನು ಹಾಗೆಯೇ ಕಣ್ಣು ಮುಚ್ಚಿಕೊಂಡು ಮಲಗಿರುವದನ್ನು ನೋಡಿದಳು. ಆಫೀಸಿನಿಂದ ಬಂದವನು ಬಟ್ಟೆಗಳನ್ನೂ ಬಿಚ್ಚಿರಲಿಲ್ಲ. ಕೈಕಾಲು ಮುಖವನ್ನು ತೊಳೆದುಕೊಂಡಿರಲಿಲ್ಲ. ಬಳಿಗೆ ಹೋಗಿ ಮೆಲ್ಲನೆ "ಟಿಫಿನ್ನು ತಂದಿದ್ದೇನೆ" ಎಂದಳು.

ಕಂಣು ತೆರೆಯದೇ "ಎಲ್ಲಿಯಾದರೂ ಇಟ್ಟುಹೋಗು" ಎಂದ.

ಆದರೆ ಲಲಿತೆಯು ತಿಂಡಿಯ ತಟ್ಟೆಯನ್ನು ಎಲ್ಲಿಯಾದರೂ ಇಟ್ಟು ಹೋಗಲಿಲ್ಲ. ಹಾಗೆಯೇ ಹಿಡಿದುಕೊಂಡು ನಿಂತಳು.

ಕಂಣುಗಳನ್ನು ಮುಚ್ಚಿಕೊಂಡಿದ್ದರೂ ಲಲಿತೆಯು ಹೋಗಿಲ್ಲ, ಹಾಗೆಯೇ ನಿಂತುಬಿಟ್ಟಿರುವಳೆನ್ನುವದು ಅವನಿಗೆ ಗೊತ್ತಾಗುತ್ತಿತ್ತು. ಎರಡು ಮೂರು ನಿಮಿಷ ತಡೆದು ಮತ್ತೆ "ಎಲ್ಲಿಯವರೆಗೆ ಹೀಗೆಯೇ ನಿಂತಿರುವೆ ಲಲಿತಾ ? ಸ್ವಲ್ಪ ತಡೆದು ತಿನ್ನುತ್ತೇನೆ, ಇಟ್ಟು ಹೋಗು" ಎಂದ.

ನಲ್ಲಿ ಲಲಿತೆಯು ಈವಾಗಲೂ ಹೋಗಲಿಲ್ಲ. ನಿಂತುನಿಂತುಕೊಂಡೇ ಎಂಥ್ಮನದಲ್ಲಿ ರೇಗುತ್ತಿದ್ದಳು. ಆದರೆ ಆ ಕೋಪವನ್ನು ಬಿಗಿಹಿಡಿದು

ಕೋಮಲವಾದ ದನಿಯಿಂದ “ ತಡವಾದರೆ ಆಗಲಿ, ಈವಾಗ ಕೆಳಗೆ ನಾನು ಮಾಡಬೇಕಾದ ಕೆಲಸವೇನೂ ಇಲ್ಲ ” ಎಂದಳು.

ಕಣ್ಣು ತೆರೆದು ಶೇಖರ ನಕ್ಕು “ ಬಾಯಿಂದ ಈಗಾದರೂ ಮಾತು ಹೊರಬಿತ್ತಲ್ಲ ! ಮನೆಯಲ್ಲಿ ಕೆಲಸವಿರದಿದ್ದರೆ ಪಕ್ಕದ ಮನೆಯಲ್ಲಿ ಇರಬಹುದಲ್ಲ. ಅಲ್ಲಿಯೂ ಇರದೇ ಇದ್ದರೆ ಅದರ ಮುಂದಿನ ಮನೆಯಲ್ಲಿ ಇರಬಹುದು. ಅಲ್ಲಿ ಕೆಲಸಕ್ಕೇನೂ ಕಮ್ಮಿ ಇಲ್ಲ. ನಿನಗೆ ಇದೊಂದೇ ಮನೆ ಇಲ್ಲ ಲಲಿತಾ ! ” ಎಂದ.

“ ಅದನ್ನೇನೂ ನೀವು ಹೇಳಬೇಕಾಗಿಲ್ಲ ” ಎಂದವಳೇ ಮಿಠಾಯಿಗಳ ತಟ್ಟೆಯನ್ನು ಜೋರಿನಿಂದ ಮೇಜಿನ ಮೇಲಿಟ್ಟು ತ್ವರೆಯಿಂದ ರೂಮಿನ ಹೊರಗೆ ಹೋಗಿಬಿಟ್ಟಳು.

ಸ್ವಲ್ಪ ಉಚ್ಚಸ್ವರದಿಂದ “ ಸಾಯಂಕಾಲ ಸ್ವಲ್ಪ ಇತ್ತ ಸುಳಿದು ಹೋಗು ” ಎಂದ ಶೇಖರ.

“ ನೂರಾರು ಸಲ ಮೇಲಕ್ಕೆ ಬರೋದು ಹೋಗೋದು ನನ್ನಿಂದಾಗುವದಿಲ್ಲ ” ಎನ್ನುತ್ತ ಅವಳು ಹೊರಟುಹೋದಳು.

ಕೆಳಗೆ ಬರುತ್ತಲೇ ಭುವನೇಶ್ವರೀದೇವಿಯವರು “ ನೀನು ಮಿಠಾಯಿಗಳನ್ನೇನೋ ಕೊಟ್ಟುಬಂದೆ. ಎಲೆಅಡಿಕೆಯನ್ನೇ ಮರೆತುಬಿಟ್ಟೆ. ಪುನಃ ಹೋಗಬೇಕಾಯಿತಲ್ಲ ನೋಡು ” ಎಂದರು.

“ ನನಗೆ ಬಹಳ ಹಸಿವೆಯಾಗುತ್ತಿದೆಯಮ್ಮಾ. ಮೇಲಿಂದ ಮೇಲೆ ಮೇಲಕ್ಕೆ ಹತ್ತಿ-ಇಳಿಯುವದು ನನ್ನಿಂದಾಗದು. ಮತ್ತಾರ ಕಡೆಯಿಂದಾದರೂ ಕೊಟ್ಟು ಕಳಿಸಿ ” ಎಂದು ದೊಪ್ಪನೆ ನೆಲದ ಮೇಲೆ ಕುಳಿತುಬಿಟ್ಟಳು.

ಲಲಿತೆಯ ಮನೋಹರ ಮುಖದ ಮೇಲೆ ಕೋಪ ಮತ್ತು ಅಸಂತೋಷದ ಮಿನುಗನ್ನು ನೋಡಿ ಭುವನೇಶ್ವರೀದೇವಿಯವರು ನಗುತ್ತ “ ಒಳ್ಳೇದು ಮಗೂ, ನೀನು ಕುಳಿತುಕೊಂಡು ಊಟಮಾಡು, ನೀರು ಕುಡಿ. ಹಸಿವೆಯಿಂದ ಬಳಲಬೇಡ. ನಾನು ದಾಸಿಯ ಕೈಲಿ ಎಲೆ ಅಡಿಕೆ ಕೊಟ್ಟು ಕಳಿಸುತ್ತೇನೆ ” ಎಂದರು.

ಲಲಿತೆಯು ಮಾತನಾಡದೇ ಹೋಗಿ ಊಟಕ್ಕೆ ಕುಳಿತಳು.

ಅವತ್ತು ಲಲಿತೆಯು ಸಿನೇಮಾಕ್ಕೆ ಹೋಗಲಿಲ್ಲ. ಆದರೂ ಶೇಖರ ಅವಳ ಮೇಲೆ ಕೋಪಿಸಿಕೊಂಡು ಬಿರುನುಡಿಗಳನ್ನಾಡಿದ. ಇದರಿಂದ ಲಲಿತೆಯ ಮೃದುವಾದ ಮನಸ್ಸು ಬಹು ನೊಂದುಕೊಂಡಿತು. ಆದುದರಿಂದಲೇ ಅವಳು ೫-೬ ದಿನ ಶೇಖರನ ದೃಷ್ಟಿಗೆ ಬೀಳಲಿಲ್ಲ. ಆದರೆ ಶೇಖರನು ಆಫೀಸಿಗೆ ಹೋದ ಮೇಲೆ ಅವನ ರೂಮಿಗೆ ಹೋಗಿ ಸ್ವಚ್ಛ ಮಾಡಿ, ಸಾಮಾನುಗಳನ್ನು ಅಂದವಾಗಿಟ್ಟು ಬರುವದನ್ನು ಮಾತ್ರ ಅವಳು ನಿಲ್ಲಿಸಲಿಲ್ಲ. ತನ್ನ ತಪ್ಪು ತನಗೆ ತಿಳಿದ ಮೇಲೆ ಶೇಖರ ಲಲಿತೆಯನ್ನು ಕರೆಕಳುಹಿದ. ಆದರೂ ಲಲಿತೆಯು ಹೋಗಲಿಲ್ಲ.

೪

ಒಬ್ಬ ಮುದುಕ ಈ ಓಣಿಯಲ್ಲಿ ದಿನಾಲು ಭಿಕ್ಷೆ ಬೇಡಲು ಬರುತ್ತಿದ್ದ. ಅವನ ಮೇಲೆ ಲಲಿತೆಯ ದಯಾಪೂರಿತವಾದ ದೃಷ್ಟಿ ಬಿದ್ದಿತ್ತು. ಅವನು ಬಂದಾಗಲೆಲ್ಲ ಅವಳು ಅವನಿಗೆ ಒಂದು ರೂಪಾಯಿ ಕೊಟ್ಟು ಕಳುಹುತ್ತಿದ್ದಳು. ಆಗ ಅವನು ಕೊಡುವ ಸಂಭವನೀಯ ಹಾಗೂ ಅಸಂಭವನೀಯವಾದ ಆಶೀರ್ವಾದಗಳನ್ನು ಅವಳು ಬಹು ಆಸ್ಥೆಯಿಂದ ಕೇಳುತ್ತಿದ್ದಳು. ಲಲಿತೆಯು ತನ್ನ ಪೂರ್ವಜನ್ಮದ ತಾಯಿಯೆಂದು ಅವನು ಹೇಳುತ್ತಿದ್ದ. ಅವಳನ್ನು ನೋಡಿದ ದಿನವೇ ಈ ಕರುಣಾಮಯೀ ಬಾಲಿಕೆಯು ತನ್ನ ಪೂರ್ವಜನ್ಮದ ತಾಯಿಯೆಂದು ಅವನು ಅರಿತುಕೊಂಡ. ಆವ ಆಧಾರದಿಂದ ಅವನು ಅರಿತುಕೊಂಡನೊ ಹೇಳಲಿಕ್ಕಾಗದು. ಅಂತೂ ಅವಳನ್ನು ತನ್ನ ತಾಯಿಯೆಂದು ಭಾವಿಸಿದ. ಲಲಿತೆಯ ಈ ಮುದಿಮಗನು ಇವತ್ತು ಬಾಗಿಲ ಬಳಿ ಬಂದುನಿಂತು ಉಚ್ಚಸ್ವರದಿಂದ ಕೂಗಿದನು—"ನನ್ನಮ್ಮಾ, ನನ್ನ ತಾಯೀ, ಎಲ್ಲಿರುವೆ?"

ಮಗುವಿನ ಈ ಆರ್ತನಾದವನ್ನು ಕೇಳಿ ಲಲಿತೆಗೆ ಏನು ಮಾಡಬೇಕೆನ್ನುವದು ತೋಚದಾಯಿತು. ಈವಾಗ ಶೇಖರಣ್ಣಾ ತನ್ನ ರೂಮಿನಲ್ಲಿರಬಹುದು, ರೂಪಾಯಿಯನ್ನು ತರುವದಕ್ಕೆ ಹೇಗೆ ಹೋಗಬೇಕು, ಎಂದು ಯೋಚಿಸತೊಡಗಿದಳು. ಅತ್ತಿತ್ತ ನೋಡಿ ಲಲಿತೆಯು ತನ್ನ

ಅತ್ತೆಯ ಬಳಿಗೆ ಹೋದಳು. ಅತ್ತೆಯವರು ಇದೇ ಈವಾಗ ದಾಸಿ ಯೊಡನೆ ಜಗಳ ಕಾಯ್ದು ಮುಖವನ್ನು ಕೆಂಪಗೆ ಮಾಡಿಕೊಂಡು ಅಡಿಗೆ ಮಾಡತೊಡಗಿದ್ದಾರೆ. ಆದುದರಿಂದ ಅವರನ್ನೂ ಬೇಡುವುದಕ್ಕೆ ಲಲಿತೆಗೆ ಧೈರ್ಯವು ಸಾಲಲಿಲ್ಲ. ಹೊರಗೆ ಬಂದು ಇಣಿಕಿನೋಡಿದಳು. ಮುದುಕ ಭಿಕ್ಷುಕನು ತನ್ನ ಕೋಲನ್ನು ಬಾಗಿಲಿಗೆ ಆನಿಸಿ ನಿಲ್ಲಿಸಿ, ಬಳಿಯಲ್ಲಿಯೇ ಕುಳಿತುಕೊಂಡಿದ್ದ. ಇವತ್ತಿನವರೆಗೂ ಭಿಕ್ಷುಕನು ಬರಿಗೈಯಿಂದ ಹಿಂತಿರುಗಿ ಹೋಗಿರಲಿಲ್ಲ. ಅವನನ್ನು ನಿರಾಶೆ ಮಾಡಲು ಲಲಿತೆಯ ಮನವು ಒಪ್ಪಲಿಲ್ಲ.

ಭಿಕ್ಷುಕನು ಪುನಃ ಕೂಗಿದನು.

ಅನ್ನಾಕಾಲಿಯು ಓಡುತ್ತ ಬಂದು "ಅಕ್ಕಾ, ಆ ನಿನ್ನ ಪ್ರೀತಿಯ ಮುದಿಮಗ ಬಂದಿದ್ದಾನೆ" ಎಂದು ಹೇಳಿದಳು.

"ಏ ಕಾಲೀ, ನನ್ನದೊಂದು ಕೆಲಸ ಮಾಡಿಕೊಡು ಬಂಗಾರ! ನನ್ನ ಕೈ ಖಾಲಿ ಇಲ್ಲ. ನೀನು ಈಗಲೇ ಶೇಖರಣ್ಣನ ಬಳಿಗೆ ಹೋಗಿ ಅವರಿಂದ ಒಂದು ರೂಪಾಯಿ ತೆಗೆದುಕೊಂಡು ಬಾ ಹೋಗು."

ಅನ್ನಾಕಾಲಿಯು ಓಡುತ್ತ ಶೇಖರನ ಬಳಿಗೆ ಹೋಗಿ ರೂಪಾಯಿ ತೆಗೆದುಕೊಂಡು ಬಂದು ಲಲಿತೆಯ ಕೈಯಲ್ಲಿ ಕೊಟ್ಟಳು.

"ಕಾಲೀ, ಶೇಖರಣ್ಣ ಏನಾದರೂ ಎಂದರೇನು?"

"ಏನೂ ಇಲ್ಲ. ಜೇಬಿನೊಳಗಿಂದ ರೂಪಾಯಿ ತೆಗೆದುಕೊಳ್ಳಲಿಕ್ಕೆ ಹೇಳಿದರು. ತೆಗೆದುಕೊಂಡು ಬಂದುಬಿಟ್ಟೆ."

"ಮತ್ತೆ ಏನೂ ಹೇಳಲಿಲ್ಲವೇ?"

"ಇಲ್ಲ, ಮತ್ತೇನೂ ಹೇಳಲಿಲ್ಲ" ಎನ್ನುತ್ತ ತನ್ನ ಆಟದ ಕಡೆಗೆ ಅನ್ನಾಕಾಲಿಯು ಓಡಿಹೋದಳು.

ಲಲಿತೆಯು ತನ್ನ ಮುದಿಮಗ ಭಿಕ್ಷುಕನಿಗೆ ಒಂದು ರೂಪಾಯಿ ಕೊಟ್ಟು ಕಳುಹಿದಳು. ಆವಳು ದಿನದಂತೆ ಸ್ವಲ್ಪ ಹೊತ್ತು ನಿಂತು ಆವನ ಮಧುರ ಆಶೀರ್ವಾದಗಳನ್ನು ಆಲಿಸಲಿಲ್ಲ. ಆಲಿಸಲು ಮನಸ್ಸು ಒಪ್ಪಲಿಲ್ಲ.

ಇತ್ತ ಕೆಲವು ದಿನಗಳಿಂದ ಪುನಃ ಇಸ್ಪೀಟಿನ ಆಟವು ಭರದಿಂದ ಸಾಗಿತ್ತು. ಆದರೆ ಇವತ್ತು ಮಧ್ಯಾಹ್ನ ಲಲಿತೆಯು ಆಟಕ್ಕೆ ಹೋಗಲಿಲ್ಲ. ತಲೆನೋವಿನ ನೆಪದಿಂದ ಮಲಗಿಕೊಂಡಿದ್ದಳು. ನಿಜವಾಗಿಯೂ ಅವಳ ಮನಸ್ಸು ಇವತ್ತು ನೆಮ್ಮದಿಯಾಗಿರಲಿಲ್ಲ. ಅತ್ಯಂತ ಕದಡಿಹೋಗಿತ್ತು. ಇಳಿಹೊತ್ತಿನಲ್ಲಿ ಅನ್ನಾಕಾಲಿಯನ್ನು ಕರೆದು ಕೇಳಿದಳು " ಕಾಲೀ, ನೀನು ಪಾಠ ಒಪ್ಪಿಸೋಕೆ ಶೇಖರಣ್ಣನ ಬಳಿ ಹೋಗುವದಿಲ್ಲವೆ? "

" ಹೋಗೋದಿಲ್ಲವೇಕೆ? ದಿನಾಲು ಹೋಗುತ್ತೇನೆ. "

"ನನ್ನ ವಿಷಯವಾಗಿ ಶೇಖರಣ್ಣ ಏನೂ ಮಾತನಾಡುವದಿಲ್ಲವೆ? "

" ಇಲ್ಲವಲ್ಲ! ಹಾಂ. ಮೊನ್ನೆ ಏನೋ ಸ್ವಲ್ಪ ನಿಮ್ಮ ವಿಷಯವಾಗಿ ಕೇಳಿದ್ದ-ನೀವು ಇಸ್ಪೀಟು ಆಡಲು ಹೋಗುತ್ತೀರೊ ಇಲ್ಲವೊ ಅಂತಾ. "

ಗಾಬರಿಯಿಂದ ಕೇಳಿದಳು " ನೀನೇನು ಹೇಳಿದೆ? "

" ಚಾರುಬಾಲೆಯ ಮನೆಗೆ ದಿನಾಲು ನೀವು ಇಸ್ಪೀಟು ಆಡಲಿಕ್ಕೆ ಹೋಗುತ್ತೀರಿ ಅಂತಾ ಹೇಳಿಬಿಟ್ಟೆ. ಯಾರು ಯಾರು ಇಸ್ಪೀಟು ಆಡುತ್ತಾರೆ ಅಂತ ಕೇಳಿದರು ಶೇಖರಣ್ಣ. ನೀವು, ಚಾರುಬಾಲಾ, ಗಿರೀಂದ್ರಬಾಬು ಆಡುತ್ತಾರೆ ಅಂತಾ ಹೇಳಿದೆ. ಅಕ್ಕ, ನೀವು ಚೆನ್ನಾಗಿ ಆಡುತ್ತೀರೊ ಅಥವಾ ಚಾರುಬಾಲೆಯ ಮಾವ ಗಿರೀಂದ್ರಬಾಬು ಚೆನ್ನಾಗಿ ಆಡುತ್ತಾರೊ? ಪಕ್ಕದ ಮನೆಯ ಚಿಕ್ಕಮ್ಮನವರು ನೀವೇ ಚೆನ್ನಾಗಿ ಆಡುತ್ತೀರೆಂದು ಹೇಳಿದರು. ಹೌದೊ? "

ಲಲಿತೆಯು ಅಸಹನದಿಂದ " ಇದನ್ನೆಲ್ಲ ನೀನೇಕೆ ಹೇಳಿದೆ ಕತ್ತೆ? ಪ್ರತಿಯೊಂದು ಮಾತಿನಲ್ಲಿಯೂ ನಿನ್ನ ಎರಡು ಅಕ್ಕೀಕಾಳು ಬೆರೆಸುವದಕ್ಕೆ ಹೋಗುತ್ತೀಯಾ. ಹೋಗು, ಇನ್ನು ಮೇಲೆ ನಾನು ನಿನಗೆ ಮಿಠಾಯಿ ತಿಂಡಿ ಕೊಡುವದೇ ಇಲ್ಲ " ಎಂದಳು.

ಲಲಿತೆಯು ಕೋಪಿಸಿಕೊಂಡು ಹೊರಟುಹೋದಳು.

ಅನ್ನಾಕಾಲಿಗೆ ದಿಕ್ಕು ತೋಚದಂತಾಯಿತು. ಈ ಪ್ರಕಾರ ಲಲಿತೆಯ ಭಾವನೆಯಲ್ಲಿ ಬದಲಾವಣೆಯಾದುದರ ಕಾರಣವು ಆ ಚಿಕ್ಕ ಕೂಸಿಗೆ ತಿಳಿಯಲಿಲ್ಲ.

ಲಲಿತೆಯು ಈಗೆರಡು ದಿನಗಳಿಂದ ಇಸ್ಪೀಟು ಆಡಲು ಹೋಗುತ್ತಿಲ್ಲವಾದ್ದರಿಂದ ಮನೋರಮೆಯು ಆಟವನ್ನು ನಿಲ್ಲಿಸಿದ್ದಾಳೆ. ಲಲಿತೆಯ ಮೇಲೆ ಗಿರೀಂದ್ರನಿಗೆ ಮೋಹವು ಉತ್ಪನ್ನವಾಗಿದೆಯೆಂಬುದರ ಸಂಶಯ ಮೊದಲೇ ಮನೋರಮೆಗೆ ಬಂತು. ಅದು ಇಂದು ಸಂಪೂರ್ಣವಾಗಿ ಸತ್ಯವೆಂದು ಸಿದ್ಧವಾಯಿತು.

ಗಿರೀಂದ್ರನು ಈ ಎರಡೂ ದಿನಗಳನ್ನು ಹಾಗೂ ಹೀಗೂ ಮಾಡಿ ನೂಕಿದನು. ಅತ್ಯಂತ ಉತ್ಸುಕತೆಯಿಂದಲೂ, ಅನ್ಯಮನಸ್ಕನಾಗಿಯೂ ಅತ್ತಿತ್ತ ಅಲೆದಾಡಿ, ಎರಡು ದಿನಗಳನ್ನು ಕಳೆದನು. ಮೂರನೇ ದಿನ ಮಧ್ಯಾಹ್ನ ಅಡಿಗೆಮನೆಗೆ ಹೋಗಿ ತಂಗಿಯನ್ನು ಕೇಳಿದನು—"ಇವತ್ತೂ ಆಟವಿಲ್ಲವೆ?"

"ಆಡುವವರೇ ಇಲ್ಲದ ಮೇಲೆ ಆಟ ಹೇಗೆ ನಡೆಯಬೇಕು? ನಾವು ಮೂರೇ ಜನ. ಇಷ್ಟವಿದ್ದರೆ ಆಡೋಣ ಬಾ."

ಗಿರೀಂದ್ರ ಒಪ್ಪಲಿಲ್ಲ. ಉದಾಸೀನತೆಯಿಂದ "ಮೂರೇ ಜನರು ಏನು ಆಟ ಆಡೋದು? ಆ ಮನೆಯ ಹುಡುಗಿಯ ಹೆಸರು ಲಲಿತಾ ಅಲ್ಲವೆ? ಅವಳನ್ನು ಏಕೆ ಕರೆಕಳುಹುವದಿಲ್ಲ? ಬಹು ಸೊಗಸಾಗಿ ಆಟವಾಡುತ್ತಾಳೆ" ಎಂದ.

"ಅವಳು ಬರುವದಿಲ್ಲ."

ಗಿರೀಂದ್ರ ಖಿನ್ನನಾಗಿ "ಏಕೆ ಬರುವದಿಲ್ಲ? ಮನೆಯವರು ಹೋಗಬೇಡವೆಂದು ಹೇಳಿರಬೇಕು ಅಲ್ಲವೆ?" ಎಂದ.

"ಇಲ್ಲ. ಅವಳ ಮನೆಯವರು ಅಂತಹ ಜನರೇನೂ ಇಲ್ಲ. ಅವಳೇ ಬರುವದಿಲ್ಲ."

ಗಿರೀಂದ್ರ ಪ್ರಸನ್ನತೆಯಿಂದ "ನೀನು ಹೋಗಿ ಬಲವಂತ ಮಾಡಿದರೆ ಬಂದೇಬಿಡುವಳು" ಎಂದ.

ಈ ನುಡಿಗಳನ್ನು ನುಡಿದುಬಿಟ್ಟ; ಆದರೆ ಮನದಲ್ಲಿ ಅಪ್ರತಿಭನಾದ. ಮನೋರಮೆಯು ನಕ್ಕು ಲಲಿತೆಯ ಮನೆಗೆ ಹೋಗಿ ಅವಳನ್ನು ಕರೆದುಕೊಂಡು ಬಂದಳು. ಲಲಿತೆಯು ಆಡಲಾರಂಭಿಸಿದ ಮೇಲೆ ಕೇಳ

ಬೇಕೇ? ಆಟಕ್ಕೆ ಕಳೆಬಂತು. ಅಲ್ಲದೆ ಲಲಿತೆಯ ಪಕ್ಷವೇ ಜಯಶೀಲವಾಗತೊಡಗಿತು.

ಎರಡು ಗಂಟೆಯ ಕಾಲ ಆಟವು ನಡೆಯಿತು. ಅಕಸ್ಮಾತ್ ಅನ್ನಾಕಾಲಿಯು ಬಂದು "ಲಲಿತಕ್ಕ, ಶೇಖರಣ್ಣ ನಿನ್ನನ್ನು ಕರೆಯುತ್ತಿದ್ದಾರೆ. ಬೇಗನೆ ನಡೆ" ಎಂದಳು.

ಲಲಿತೆಯ ಮುಖವು ಕಳೆಗುಂದಿತು. ಕೈಯಲ್ಲಿದ್ದ ಇಸ್ಪೀಟುಗಳನ್ನು ಹಾಗೆಯೇ ಕೆಳಗಿಟ್ಟು ಕೇಳಿದಳು "ಶೇಖರಣ್ಣ ಇಂದು ಆಫೀಸಿಗೆ ಹೋಗಲಿಲ್ಲವೆ?"

"ಯಾರಿಗೆ ಗೊತ್ತು. ಹೊರಟುಬಂದಿದ್ದಾರೆ" ಎಂದು ತಲೆಯಲ್ಲಾಡಿಸುತ್ತ ಅವಳು ಹೊರಟುಹೋದಳು.

"ನಾನೂ ಹೋಗುತ್ತೇನೆ" ಎಂದು ಎದ್ದುನಿಂತಳು ಲಲಿತಾ. ಕೂಡಲೇ ಕೈಹಿಡಿದು ಮನೋರಮೆಯು "ಹೀಗೆಯೇ ನಿನ್ನನ್ನು ಬಿಡುವದಿಲ್ಲ. ಇನ್ನೊಂದೆರಡು ಕೈ ಆಡಿ ಹೋಗು" ಎಂದಳು.

"ಇಲ್ಲ ಚಿಕ್ಕಮ್ಮ, ತಡಮಾಡಿದರೆ ಶೇಖರಣ್ಣ ಸಿಟ್ಟು ಮಾಡುತ್ತಾರೆ" ಎಂದವಳೇ ಕೈಬಿಡಿಸಿಕೊಂಡು ತ್ವರೆಯಿಂದ ಹೊರಟುಹೋದಳು.

"ಶೇಖರಣ್ಣ ಯಾರಕ್ಕ?" ಎಂದು ಕೇಳಿದ ಗಿರೀಂದ್ರ.

ಮನೋರಮೆಯು "ಅಗೋ, ಎದುರಿಗೆ ಕಾಣುವ ದೊಡ್ಡ ಮನೆಯವರು" ಎಂದಳು.

"ನವೀನಬಾಬುಗಳು ಅವರ ಆಪ್ತರೋ?" ಎಂದು ಗಿರೀಂದ್ರ ಕೇಳಿದ.

ಮನೋರಮೆಯು ತನ್ನ ಮಗಳ ಮುಖವನ್ನು ನೋಡುತ್ತ ನಗುತ್ತ "ಆಪ್ತರು ಹೇಗಾದಾರು? ಲಲಿತೆಯ ಮಾವನ ಪೂರ್ವಜರ ಸಂಪತ್ತಾದ ಈ ಗುಡಿಸಲನ್ನು ಕೂಡ ಮಾರಿಸುವ ಯೋಚನೆ ಮಾಡುತ್ತಿದ್ದಾರೆ ಮುದುಕ ನವೀನರಾಯರು" ಎಂದಳು.

ಗಿರೀಂದ್ರ ಆಶ್ಚರ್ಯದಿಂದ ಅಕ್ಕನ ಮುಖವನ್ನು ಈಕ್ಷಿಸತೊಡಗಿದ.

"ರೂಪಾಯಿಗಳ ಅಡಚಣಿಯಿಂದ ಗುರುಚರಣರ ನಡುವಿನ ಮಗಳ ಮದಿವೆ ನಿಂತುಹೋಯಿತು. ಆಗ ನವೀನರಾಯರು ಅಗಣಿತ ಬಡ್ಡೀ ತೆಗೆದುಕೊಂಡು ಹಣವನ್ನು ಸಾಲ ಕೊಟ್ಟರು. ಮನೆಯನ್ನು ಅಡವು ಇಟ್ಟುಕೊಂಡರು. ಸಾಲವನ್ನು ಗುರುಚರಣರು ತೀರಿಸುವಂತಿಲ್ಲ, ಮತ್ತು ಕೊನೆಗೆ ನವೀನಬಾಬುಗಳ ಪಾಲಕ್ಕೇ ಹೋಗತಕ್ಕುದು" ಎಂದು ಮನೋರಮೆಯು ಹೇಳಿ ಈ ಚಿಕ್ಕ ಕತೆಗೆ ತನ್ನ ಟೀಕೆಯನ್ನು ಜೋಡಿಸಿಬಿಟ್ಟಳು- "ಪಾಪ, ಬಡ ಗುರುಚರಣರ ಮನೆಯನ್ನು ಕೆಡವಿ, ಅದೇ ಸ್ಥಾನದ ಮೇಲೆ ಈ ಚಿಕ್ಕ ಮಗ ಶೇಖರನಾಥನಿಗೋಸ್ಕರ ಒಂದು ಭವ್ಯವಾದ ಸುಂದರವಾದ ಮನೆಯನ್ನು ಕಟ್ಟಿಸಿಕೊಡಬೇಕೆಂದು ನವೀನರಾಯರು ಯೋಚಿಸಿದ್ದಾರೆ. ಉಳಿದ ಇರ್ವರು ಮಕ್ಕಳಿಗೆ ಎರಡು ಮನೆಗಳು ಇದ್ದೇ ಇವೆ. ಮೂರನೆಯವನಿಗೇ ಇರಲಿಲ್ಲ. ಇನ್ನು ಅವನಿಗೂ ಒಂದು ಮನೆಯಾಗುವದು. ಮುದುಕರ ವಿಚಾರವೇನೂ ಕೆಟ್ಟುದಲ್ಲ."

ಈ ಸಾದ್ಯಂತ ಇತಿಹಾಸವನ್ನು ಕೇಳಿ ಗಿರೀಂದ್ರನಿಗೆ ಅತ್ಯಂತ ಖೇದವಾಯಿತು. ಕೇಳಿದ- "ಅಕ್ಕ, ಗುರುಚರಣರಿಗೆ ಎಷ್ಟೋ ಜನ ಹುಡುಗಿಯರಿದ್ದಾರೆ. ಅವರ ಮದಿವೆಯನ್ನು ಅವರು ಹೇಗೆ ಮಾಡುವರು?"

"ತಮ್ಮ ಮಕ್ಕಳಲ್ಲದೆ ತಂಗಿಯ ಮಗಳು ಲಲಿತೆಯೂ ಒಬ್ಬಳಿದ್ದಾಳೆ. ಅವಳಿಗೆ ತಂದೆತಾಯಿ ಯಾರೂ ಇಲ್ಲ. ಈ ಅನಾಥ ಬಾಲಿಕೆಯ ವಿವಾಹದ ಭಾರವೂ ಗುರುಚರಣರ ಮೇಲೆಯೆ ಬಿದ್ದಿದೆ. ದೊಡ್ಡವಳಾಗಿಬಿಟ್ಟಿದ್ದಾಳೆ. ತಮ್ಮ ಮಕ್ಕಳಿಗಿಂತಲೂ ಮುಂಚಿತವಾಗಿ ಈ ವರ್ಷ ಈ ಹುಡುಗಿಯ ಮದಿವೆಯನ್ನು ಹೇಗಾದರೂ ಮಾಡಿ ಮಾಡಲೇಬೇಕು. ಗುರುಚರಣರು ಸನಾತನಿಗಳು. ಅವರ ಸಮಾಜ ಹಾಳು ಸಮಾಜ. ಹಳೆಯದೆಲ್ಲ ಹೊನ್ನು, ಹೊಸದೆಲ್ಲ ಹುಳುಕು ಎನ್ನುವವರೇ ಬಹಳ ಮಂದಿ. ಒಬ್ಬರಿಗೊಬ್ಬರು ಸಹಾಯ-ಸಹಾನುಭೂತಿಯಿಂದ ನಡೆಯುವ ಮಾತಂತೂ ದೂರ ಉಳಿಯಿತು. ಸ್ವಲ್ಪ ಹಳೆಯ ರೂಢಿಯ ವಿರುದ್ಧ ಹೋಗಿ, ಸುಧಾರಣೆಯ ಕಡೆಗೆ ಕಣ್ಣು ಹಾಕಿದರೆ ಸರಿ, ಎಲ್ಲರೂ ಸುಧಾ

ರಣೆಯ ಕಡೆಗೆ ಕಣ್ಣು ಹಾಕಿದರೆ ಸರಿ, ಎಲ್ಲರೂ ಸುಧಾರಕರೊಡನೆ ಆಹಾರ-ವ್ಯವಹಾರವನ್ನು ನಿಲ್ಲಿಸಿಬಿಡುತ್ತಾರೆ, ಬಹಿಷ್ಕಾರಹಾಕಲಿಕ್ಕೆ ಕೂಡಲೇ ಸಿದ್ಧರಾಗುತ್ತಾರೆ. ನಾವು ಬ್ರಹ್ಮಸಮಾಜದವರು ಎಷ್ಟೋ ಉತ್ತಮಸ್ಥಿತಿಯಲ್ಲಿದ್ದುಕೊಂಡು ಸಂತೋಷದಿಂದ ಕಾಲಕಳೆಯುತ್ತೇವೆ ಕಣೋ ಗಿರೀಂದ್ರ " ಎಂದಳು ಮನೋರಮೆ.

ಗಿರೀಂದ್ರ ಸುಮ್ಮನಿದ್ದ. ಪುನಃ ಮನೋರಮೆಯು ಮಾತಿಗೆ ಮೊದಲು ಮಾಡಿದಳು: "ಆ ದಿನ ಲಲಿತೆಯ ಅತ್ತೆ ಅವಳ ವಿಷಯವಾಗಿ ಮಾತನಾಡುತ್ತಿರುವಾಗ ಅತ್ತುಬಿಟ್ಟಳು. ಅವಳ ಮದಿವೆ ಹೇಗಾದೀ ತೆನ್ನುವದರ ಚಿಂತೆಯೇ ಚಿಂತೆ. ಗುರುಚರಣರೂ ಇದೇ ಚಿಂತೆಯಿಂದ ಕೊರಗಿಕೊರಗಿ ಅನ್ನ ನೀರುಗಳನ್ನೂ ಬಿಟ್ಟುಬಿಟ್ಟಿದ್ದಾರೆ. ಪಾಪ, ಏನುಮಾಡುವರು, ಚಿಂತೆಯಿಂದ ಊಟವೇ ರುಚಿಸುವದಿಲ್ಲ. ಗಿರೀಂದ್ರ ಕೇಳೋ. ಮುಂಗೇರಿನಲ್ಲಿ ನಿನಗೆ ಬಹುಜನ ಇಷ್ಟಮಿತ್ರರು ಇರಬಹುದು. ಕೇವಲ ಈ ಹುಡುಗಿಯ ರೂಪ-ಗುಣ ನೋಡಿ ಮದಿವೆಯಾಗಲು ಸಿದ್ಧ ನಿರುವ ಯುವಕ ಮಿತ್ರನು ನಿನಗಿಲ್ಲವೇನೋ? ನಿಜವಾಗಿಯೂ ಇಂತಹ ಸುಂದರ ಸುಶೀಲ ಕನ್ಯಾಮಣಿಯು ದೊರೆಯುವದು ದುರ್ಲಭ. ಇಂತಹ ಹುಡುಗಿಯರು ಲಕ್ಷದಲ್ಲಿ ಒಬ್ಬರು."

ಗಿರೀಂದ್ರ ನೀರಸವಾಗಿ ನಕ್ಕು ವಿಷಾದದಿಂದ "ಅಂತಹ ಮಿತ್ರ ಎಲ್ಲಿ ಸಿಗುವನಕ್ಕಾ? ಹಾಂ, ನಾನು ಧನವನ್ನು ಕೊಟ್ಟು ಈ ಕಾರ್ಯದಲ್ಲಿ ಗುರುಚರಣರಿಗೆ ನೆರವಾಗಬಹುದು " ಎಂದ.

ಗಿರೀಂದ್ರನ ತಂದೆಯವರು ಹೆಸರಾದ ಡಾಕ್ಟರು. ಅವರು ತಮ್ಮ ಔಷಧ-ಉದ್ಯೋಗದಲ್ಲಿ ವಿಪುಲ ಧನವನ್ನು ಗಳಿಸಿ ಈ ಪ್ರೀತಿಯ ಮಗನ ಪಾಲಿಗೆ ಅದನ್ನು ಬಿಟ್ಟು ಪರಲೋಕವಾಸಿಗಳಾದರು. ಈಗ ಆ ಆಸ್ತಿ-ಹಣಕ್ಕೆಲ್ಲ ಗಿರೀಂದ್ರನೇ ಒಡೆಯ.

"ನೀನು ಹಣವನ್ನು ಸಾಲ ಕೊಡುವಿಯೊ?"

"ಸಾಲವೆಂದು ಕೊಡಲಾರೆನಕ್ಕ. ಬೇಕಾದಾಗ ಅವರು ಹಿಂತಿರುಗಿ ಕೊಡಬಹುದು. ಕೊಡುವದಕ್ಕೆ ಆಗದೇ ಹೋದರೆ, ಬಿಟ್ಟರೂ

ಸರಿಯೇ. ”

ಮನೋರಮೆಗೆ ಆಶ್ಚರ್ಯವಾಯಿತು. “ಈ ರೀತಿ ಹಣವನ್ನು ಕೊಡುವವರಿಂದ ನಿನಗೇನು ಲಾಭ? ಅವರು ನಮ್ಮ ನ ಬಂಧುಕರೂ ಅಲ್ಲ, ಸಮಾಜದವರೂ ಅಲ್ಲ. ಹೀಗೆ ರೂಪಾಯಿಗಳನ್ನು ಯಾರು ಯಾರಿಗೆ ಕೊಡಬಲ್ಲರು?” ಎಂದಳು.

ಗಿರೀಂದ್ರ ತನ್ನ ಅಕ್ಕನ ಮುಖವನ್ನು ನೋಡಿ ನಗಲಾರಂಭಿಸಿದ. ಸ್ವಲ್ಪ ಹೊತ್ತು ಸುಮ್ಮನಿದ್ದು “ನಮ್ಮ ಸಮಾಜದವರೇನೋ ಅಲ್ಲ. ಆದರೆ ಅವರು ಬಂಗಾಲಿಗಳೂ ಅಲ್ಲವೇನು? ಬಂಗಾಲಿಗಳಂತೂ ಇದ್ದೇ ಇದ್ದಾರೆ, ಇದರಲ್ಲೇನು ಸಂಶಯವಿಲ್ಲ. ಇವರ ಹತ್ತಿರ ನಾಮಮಾತ್ರಕ್ಕೂ ಹಣವಿಲ್ಲ. ಇತ್ತ ನನ್ನ ಹತ್ತಿರ ಹೇರಳವಾಗಿ ಹಣವಿದೆ. ಅದನ್ನು ಯಾವ ಕಾರ್ಯದಲ್ಲಿಯೂ ತೊಡಗಿಸಿಲ್ಲ. ವ್ಯರ್ಥವಾಗಿ ಬಿದ್ದಿದೆ. ಒಂದು ಸಲ ನೀನು ಗುರುಚರಣರ ಮುಂದೆ ಈ ಪ್ರಸ್ತಾಪವನ್ನೆತ್ತು. ಅವರು ಹಣ ತೆಗೆದುಕೊಳ್ಳಲಿಕ್ಕೆ ಒಪ್ಪಿದರೆ ನಾನು ಕೊಡಲು ಸಿದ್ಧ. ಲಲಿತೆಯು ಅವರವಳೂ ಅಲ್ಲ, ನಮ್ಮವಳೂ ಅಲ್ಲ. ಅವಳ ಮದುವೆಗೆ ಅವರು ಖರ್ಚು ಮಾಡಲು ಅಸಮರ್ಥರಿದ್ದರೆ, ಸರ್ವ ಖರ್ಚಿನ ಭಾರವನ್ನೂ ನಾನೇ ಹೊತ್ತುಕೊಳ್ಳುತ್ತೇನೆ” ಎಂದ.

ಗಿರೀಂದ್ರನ ಮಾತಿನಿಂದ ಮನೋರಮೆಗೆ ವಿಶೇಷ ಸಂತೋಷವೂ ಆಗಲಿಲ್ಲ, ದುಃಖವೂ ಆಗಲಿಲ್ಲ. ಏಕೆಂದರೆ ಇದರಲ್ಲಿ ಅವಳಿಗೇನೂ ಲಾಭವೂ ಆಗುವಂತಿರಲಿಲ್ಲ, ಹಾನಿಯೂ ಆಗುವಂತಿರಲಿಲ್ಲ. ಯಾವನಾದರೂ ಒಬ್ಬ ಪುರುಷ ಇನ್ನೊಬ್ಬನಿಗೆ ಈ ರೀತಿಯಾಗಿ ಹಣ ಕೊಡುವದನ್ನು ನೋಡಿದರೆ ಯಾವ ಸ್ತ್ರೀಗೂ ಸಂತೋಷವಾಗುವದಿಲ್ಲ. ಇದು ಸಂಸಾರದ ನಿಯಮವಿದ್ದಂತೆ ತೋರುತ್ತೆ.

ಚಾರುಬಾಲೆಯು ಸುಮ್ಮನೆ ಕುಳಿತುಕೊಂಡು ಇವೆಲ್ಲ ಮಾತುಗಳನ್ನು ಕೇಳುತ್ತಿದ್ದಳು. ಗಿರೀಂದ್ರನು ಹಣ ಕೊಡಲು ಸಿದ್ಧನಾದುದನ್ನು ಕೇಳಿ ಅವಳಿಗೆ ಹಿಡಿಸಲಾರದಷ್ಟು ಆನಂದವಾಯಿತು. “ಹೀಗೆಯೇ ಮಾಡು ಮಾವ. ನಾನು ಚಿಕ್ಕಮ್ಮನಿಗೆ ಹೇಳಿಬರುತ್ತೇನೆ” ಎಂದಳು.

ಚಾರುಬಾಲೆಯ ತಾಯಿಯು ಅವಳನ್ನು ಬೆದರಿಸಿ "ಚಾರೂ, ನೀನು ಚಿಕ್ಕವಳು. ಹಿರಿಯರ ಮಾತುಕೆಲಸಗಳಲ್ಲಿ ಹೀಗೆ ಕೈಹಾಕ ಬಾರದು. ಪ್ರಸಂಗ ಬಂದರೆ ನಾನೇ ಹೋಗಿ ಹೇಳಿಬರುತ್ತೇನೆ" ಎಂದು ನುಡಿದಳು.

"ಅಹುದು ಅಕ್ಕಾ, ನೀನೇ ಹೋಗಿ ಹೇಳಿ ಬಾ. ಒಂದು ದಿನ ಬೀದಿಯಲ್ಲಿಯೇ ಒಂದು ಕಡೆ ನಿಂತು ಗುರುಚರಣರೊಡನೆ ಮಾತನಾಡಿದೆ. ಬಹು ಸರಳಸ್ವಭಾವದವರು, ಪ್ರಾಮಾಣಿಕರು ಎಂದು ನನಗೆನಿಸಿತು. ನಿನ್ನದೇನು ಅಭಿಪ್ರಾಯ?" ಎಂದು ಕೇಳಿದ ಗಿರೀಂದ್ರ.

"ಅಹುದು ಗಿರೀಂದ್ರ, ನೀನಾಡುವದು ನಿಜ. ಗಂಡ-ಹೆಂಡಿ ರಿಬ್ಬರೂ ಸಜ್ಜನರು. ಬೇಗನೇ ತಮ್ಮ ಪೂರ್ವಜರ ಮನೆಬಿಟ್ಟು ನಿರಾ ಶ್ರಿತರಾಗುವರಲ್ಲ ಎಂದು ದುಃಖಿನಾಗುತ್ತೆ. ಇದಕ್ಕೆ ಸಾಕ್ಷಿ ಲಲಿತಾ. ನೀನು ನೋಡಲಿಲ್ಲವೆ, ಶೇಖರನು ಕರೆಯುತ್ತಾನೆಂದ ಕೂಡಲೆ ಹೇಗೆ ಹೆದರಿ ಎದ್ದು ಓಡಿಹೋದಳು! ಲಲಿತೆಯೊಬ್ಬಳೇ ಏಕೆ! ಅವಳ ಮನೆ ಯವರೆಲ್ಲರೂ ಶೇಖರನ ಮನೆಯವರಿಗೆ ಮಾರಿಹೋದಂತೆ ಆಗಿದೆ. ಬೇಕಾದವರು ಬೇಕಾದಷ್ಟು ಪ್ರಶಂಸೆ ಮಾಡಲಿ, ಒಮ್ಮೆ ನವೀನರಾಯರ ಬಲೆಗೆ ಸಿಕ್ಕ ಮೇಲೆ, ಪಾರಾಗುವದು ದುಸ್ತರ. ಬಿಡುಗಡೆಯ ಆಶೆ ಯನ್ನೇ ಮಾಡುವ ಹಾಗಿಲ್ಲ ಕಂಡೆಯಾ."

"ಸರಿ, ಹಾಗಾದರೆ. ನೀನು ನಾನು ಹೇಳಿದ ವಿಷಯದ ಬಗ್ಗೆ ಅವ ರನ್ನು ವಿಚಾರಿಸುವೆಯಲ್ಲವೆ?"

"ಧನದಾನದಿಂದ ಒಂದು ಬಡಕುಟುಂಬದ ಉದ್ಧಾರಮಾಡುವದು ಒಂದು ಪವಿತ್ರವಾದ, ಪ್ರಶಂಸೆಗೆ ಪಾತ್ರವಾದ ಕಾರ್ಯ" ಎಂದು ಸ್ವಲ್ಪ ಸಮಯ ತಡೆದು ಮತ್ತೆ ಮನೋರಮೆಯು ನಕ್ಕು "ಅವರಿಗೆ ಇಷ್ಟು ಹಣ ಕೊಟ್ಟು, ಸಹಾಯಮಾಡಿ ಉಪಕಾರಮಾಡುವ ಚಿಂತೆ ನಿನಗೇಕೆ ಅಂಟಿಕೊಂಡಿತು, ಸ್ವಲ್ಪ ಹೇಳಬಾರದೆ ಗಿರೀಂದ್ರ?" ಎಂದಳು.

"ಸಹಾಯಮಾಡಲು ನಾನೇನೂ ಅಷ್ಟು ಆತುರನಾಗಿಲ್ಲ. ಆದರೆ ಸಂಕಟಸಮಯದಲ್ಲಿ ಒಬ್ಬರು ಮತ್ತೊಬ್ಬರಿಗೆ ಸಹಾಯ ಮಾಡುವದು

ಮಾನವಧರ್ಮ" ಎಂದು ನಾಚಿಕೆಯಿಂದ ಮುಖ ತಗ್ಗಿಸಿಕೊಂಡು ಹೊರಟ. ಬಾಗಿಲವರೆಗೆ ಹೋಗಿ ಪುನಃ ತಿರುಗಿಬಂದು ಕುಳಿತುಕೊಂಡ.

"ಪುನಃ ಏಕೆ ಹಿಂತಿರುಗಿಬಂದು ಕುಳಿತುಕೊಂಡೆ?"

"ಅಕ್ಕ, ನೀನು ಇಷ್ಟು ಕರುಣಾಪೂರಿತವಾದ ಕತೆಯನ್ನು ಹೇಳಿದೆಯಲ್ಲಾ, ಆದರಲ್ಲಿ ಸತ್ಯಾಂಶ ಬಹು ಸ್ವಲ್ಪ ಎಂದು ಎನಿಸುತ್ತೆ."

ಮನೋರಮೆಯು ವಿಸ್ಮಯದಿಂದ "ಏಕೆ?" ಎಂದಳು.

"ಆ ಮನೆಯ ಹುಡುಗಿ—ಲಲಿತಾ ಕೂಡಗೈದೊರೆಯಂತೆ ವೆಚ್ಚ ಮಾಡುವದನ್ನು ಕಂಡಿದ್ದೇನೆ. ದುಃಖಿಗಳು, ದರಿದ್ರರು ಹೀಗೇನೂ ಮಾಡುವದಿಲ್ಲ. ಅಕ್ಕ, ಆವೊತ್ತು ನಾವು ಸಿನೇಮಾಕ್ಕೆ ಹೋದೆವು; ಅವಳು ಬರಲಿಲ್ಲ; ಆದರೂ ಹತ್ತು ರೂಪಾಯಿಗಳನ್ನು ಕಳಿಸಿಕೊಟ್ಟಳು. ಚಾರುಬಾಲೆಯನ್ನೇ ಕೇಳು, ಲಲಿತೆಯು ಎಷ್ಟು ಖರ್ಚು ಮಾಡುತ್ತಾಳೆ ಅಂತಾ. ಪ್ರತಿ ತಿಂಗಳೂ ೨೦-೩೦ ರೂಪಾಯಿ ಖರ್ಚು ಮಾಡುತ್ತಾಳಂತೆ. ಇಷ್ಟು ಖರ್ಚು ಮಾಡದೇಹೋದರೆ ಅವಳ ಕೆಲಸವೇ ಮುಂದಕ್ಕೆ ಸಾಗುವದಿಲ್ಲವಂತೆ."

ಮನೋರಮೆಗೆ ನಂಬಿಕೆಯಾಗಲಿಲ್ಲ.

"ಗಿರೀ, ಮಾವನವರು ಹೇಳಿದುದು ನಿಜ ಅಮ್ಮಾ. ಶೇಖರಣ್ಣ ರೂಪಾಯಿಗಳನ್ನು ಕೊಡುತ್ತಾರೆ. ಇವತ್ತೇ ಅಲ್ಲ. ಚಿಕ್ಕಂದಿನಿಂದಲೂ ಲಲಿತಕ್ಕ ಶೇಖರಣ್ಣನ ಖಜಾನೆ ತೆರೆದು ರೂಪಾಯಗಳನ್ನು ತೆಗೆದುಕೊಂಡು ಬರುತ್ತಿರುತ್ತಾಳೆ. ಶೇಖರಣ್ಣ ಏನೂ ಎನ್ನುವದಿಲ್ಲ" ಎಂದಳು ಚಾರುಬಾಲೆ.

ಮನೋರಮೆಯು ಮಗಳ ಕಡೆ ಸಂದೇಹದಿಂದ ನೋಡಿ ಕೇಳಿದಳು: "ಲಲಿತೆಯು ರೂಪಾಯಿಗಳನ್ನು ತೆಗೆದುಕೊಂಡು ಹೋಗುವಾಗ ಶೇಖರನಾಥರು ನೋಡುತ್ತಾರೇನು? ಆದು ಅವರಿಗೆ ಗೊತ್ತೋ?"

ಚಾರುಬಾಲೆಯು ತಲೆಯಲ್ಲಾಡಿಸಿ "ನೋಡಿಯೇ ನೋಡುತ್ತಾರೆ. ಅವಳು ರೂಪಾಯಿಗಳನ್ನು ತೆಗೆದುಕೊಂಡು ಹೋಗುವದು, ತಿಂಗಳಿಗೆ ಸುಮಾರು ಎಷ್ಟು ಖರ್ಚುಮಾಡುತ್ತಾಳೆನ್ನುವದು—ಎಲ್ಲವೂ ಅವರಿಗೆ

ಗೊತ್ತುಂಟು. ಅವರ ಎದುರಿಗೇ ಬೀಗದ ಕೈ ತೆಗೆದುಕೊಂಡು ಖಜಾನೆ ತೆರೆದು ರೂಪಾಯಿ ತರುತ್ತಾಳೆ. ಹೋದ ತಿಂಗಳ ಅನ್ನಾಕಾಲಿಯ ಗೊಂಬೆಯ ಮದಿವೆಯ ವೆಚ್ಚವನ್ನೆಲ್ಲಾ ಲಲಿತಕ್ಕನೇ ಕೊಟ್ಟಳು ” ಎಂದಳು.

ಮನೋರಮೆಯು ಯೋಚಿಸಿ “ ಇರಬಹುದು. ಹೀಗಿದ್ದರೆ ಒಳ್ಳೆಯದೆ. ಆ ಮುದಿ ನವೀನರಾಯರಂತೆ ಮಕ್ಕಳು ಹೊಲೆಯರಿಲ್ಲ. ಎಲ್ಲ ಮಕ್ಕಳಲ್ಲಿಯೂ ತಾಯಿಯ ಗುಣಗಳೇ ಸೇರಿವೆ. ಆದುದರಿಂದಲೇ ಅವರಲ್ಲಿ ದಯಾ-ಧರ್ಮ ಇದೆ. ಮೇಲಾಗಿ ಲಲಿತೆ ಒಳ್ಳೆಯ ಹುಡುಗಿ. ಎಲ್ಲರಿಗೂ ಪ್ರೀತಿ ಬರುವ ಹಾಗೆ ಇದ್ದಾಳೆ. ಚಿಕ್ಕಂದಿನಿಂದಲೇ ಶೇಖರ ನಾಥರ ಹತ್ತಿರ ಇದ್ದು ಓದಿ ಬೆಳೆದಿದ್ದಾಳೆ. ಶೇಖರನಾಥರನ್ನು ‘ ಅಣ್ಣಾ ’ ಎಂದು ಸಂಬೋಧಿಸುತ್ತಾಳೆ. ಅಂತೆಯೇ ಎಲ್ಲರೂ ಅವಳನ್ನು ಪ್ರೀತಿ ಸುತ್ತಾರೆ. ಚಾರೂ, ನೀನು ಅವರ ಮನೆಗೆ ಆಗಾಗ್ಗೆ ಹೋಗುತ್ತೀಯೆ. ಇದೇ ಮಾಘಮಾಸದಲ್ಲಿ ಶೇಖರನಾಥರ ವಿವಾಹವಂತೆ. ಕೇಳಿದ್ದೀಯೇನೆ ? ಇದರಲ್ಲಿಯೂ ಮುದುಕನಿಗೆ ಬಹಳ ಹಣ ಹಸ್ತಗತವಾಗುತ್ತೆ ಅಂತೆ, ಹೌದೇನೇ ? ” ಎಂದಳು.

“ ಹೌದಮ್ಮಾ, ಇದೇ ಮಾಘದಲ್ಲಿ ಮದಿವೆ. ಎಲ್ಲವೂ ನಿಶ್ಚಯ ವಾಗಿಹೋಗಿದೆ. ”

೫

ಗುರುಚರಣರು ಚಿಕ್ಕವರಲ್ಲಿ ಚಿಕ್ಕವರು, ದೊಡ್ಡವರಲ್ಲಿ ದೊಡ್ಡ ವರು. ಎಲ್ಲರಲ್ಲಿಯೂ ಬೆರೆತುಕೊಂಡು ಹೋಗುವ ಸ್ವಭಾವ ಅವರದು. ಎಂತಹ ಸ್ವಭಾವದವರೇ ಇರಲಿ, ಅವರೊಡನೆ ಸಂಕೋಚವಿಲ್ಲದೆ ಮಾತ ನಾಡುತ್ತಿದ್ದರು. ಆದುದರಿಂದಲೇ ಒಂದೆರಡು ದಿನಗಳ ಬಳಕೆಯಿಂದ ಗಿರೀಂದ್ರ ಮತ್ತು ಗುರುಚರಣರಲ್ಲಿ ಗೆಳೆತನವು ಗುರುತರವಾಯಿತು. ಗುರುಚರಣರ ಮನಸ್ಸು ನಿರ್ವಿಕಾರವಾದುದು. ಚಂಚಲವಾದುದು. ಅದ ರಲ್ಲಿ ದೃಢತೆಯೆನ್ನುವದು ನಾಮಮಾತ್ರಕ್ಕೂ ಇರಲಿಲ್ಲ. ಅದುವೇ ವಾದ ವಿವಾದ, ತರ್ಕವಿತರ್ಕಗಳಲ್ಲಿ ಸೋತರೆ ಸಂತೋಷವೂ ಆಗುತ್ತಿರಲಿಲ್ಲ,

ದುಃಖವೂ ಆಗುತ್ತಿರಲಿಲ್ಲ, ಕೋಪವೂ ಅವರಿಗೆ ಬರುತ್ತಿರಲಿಲ್ಲ.

ಪ್ರತಿದಿನ ಸಾಯಂಕಾಲ ಗುರುಚರಣರು ಟೀ ಕುಡಿಯಲು ಗಿರೀಂದ್ರ ರನ್ನು ಕರೆಯುತ್ತಿದ್ದರು. ಕಚೇರಿಯಿಂದ ಮನೆಗೆ ಬರುವವರಲ್ಲಿಯೇ ಅವರ ಸ್ವಾಯವೆಲ್ಲಾ ನಷ್ಟವಾಗುತ್ತಿತ್ತು. ಮನೆಗೆ ಬಂದವರೇ ಅವರು ಕೈಕಾಲು ನೀರಿನಿಂದ ತೊಳೆದುಕೊಂಡು "ಲಲಿತಾ, ಮಗೂ, ಟೀ ತಯಾರಾಗಿದೆಯೆ?" ಎಂದು ಕೇಳಿ "ಕಾಲೀ, ಹೋಗಮ್ಮ, ಗಿರೀಂದ್ರರನ್ನು ಕರೆದುಕೊಂಡು ಬಾ" ಎಂದು ಕಾಲಿಯನ್ನು ಕಳಿಸುತ್ತಿದ್ದರು. ಗಿರೀಂದ್ರನು ಬಂದ ಮೇಲೆ ಅವನಿಗೂ ಟೀ ಕೊಟ್ಟು, ತಾವೂ ಟೀ ಕುಡಿಯುತ್ತ ವಾದಕ್ಕೆ ಮೊದಲುಮಾಡುತ್ತಿದ್ದರು.

ಒಂದೊಂದು ದಿನ ಲಲಿತೆಯು ಪಾವನ ಮರೆಯಲ್ಲಿ ಕುಳಿತು ಅವರ ವಾದವಿವಾದವನ್ನು ಕೇಳುತ್ತಿದ್ದಳು. ಗಿರೀಂದ್ರ ತನ್ನ ಯುಕ್ತಿಪ್ರಯುಕ್ತಿ ಮತ್ತು ತರ್ಕಗಳ ಬಲದಿಂದ ವಿಷಯವನ್ನು ಚೆನ್ನಾಗಿ ಪ್ರತಿಪಾದಿಸುತ್ತಿದ್ದನು. ಅವನ ಯುಕ್ತಿಗಳು ಬಿರಳು ಕಚ್ಚಿಸುತ್ತಿದ್ದವು. ವಾದದ ವಿಷಯ ಪ್ರಾಯಃ ಸಾಮಾಜಿಕವಾಗಿರುತ್ತಿತ್ತು. ಸದಾ ಸಮಾಜದ ವಿರುದ್ಧ ಯುದ್ಧವನ್ನೇ ಅವನು ಹೂಡುತ್ತಿದ್ದ. ಈವಾಗ ಸಮಾಜವು ಬಹು ಸಂಕುಚಿತವಾಗಿದೆ, ಜೀರ್ಣಶೀರ್ಣವಾಗಿದೆ. ಅದು ಹೃದಯ ಹೀನವಾಗಿದೆ. ಆಗಬಾರದ ಅತ್ಯಾಚಾರಗಳು, ಅನಾಚಾರಗಳು ನಡೆಯುತ್ತಿವೆ. ಇವೆಲ್ಲವೂ ವಿಚಾರವಂತರ ಕಣ್ಣುಗಳನ್ನು ಸೂಜಿಯಿಂದ ಚುಚ್ಚುತ್ತವೆ. ನಿಜ ಇವೆಲ್ಲ ಆರೋಪಗಳು ಸತ್ಯವಾದವುಗಳು.

ಸಮರ್ಥಿಸುವ ಮಾತು ಇಲ್ಲಿ ಇರಲಿಲ್ಲ. ಅತ್ಯಂತ ಪೀಡಿತವಾದ, ಅಶಾಂತವಾದ ಗುರುಚರಣರ ಹೃದಯದ ಮೇಲೆ ಗಿರೀಂದ್ರನ ಮಾತುಗಳು ಚೆನ್ನಾಗಿ ಮುದ್ರೆಯನ್ನು ಹಾಕುತ್ತಿದ್ದವು. ಕೊನೆಗೆ ಅವರು "ಗಿರೀಂದ್ರ, ನೀನಾಡುವದು ನಿಜವಪ್ಪಾ" ಎನ್ನುತ್ತಿದ್ದರು. "ಮದುವೆಗೆ ತಕ್ಕವಳಾದ ಮೇಲೆ ತನ್ನ ಮಗಳನ್ನು ಯೋಗ್ಯ ಮನೆತನದ ಯೋಗ್ಯ ವರನಿಗೆ ಕೊಟ್ಟು ಯೋಗ್ಯ ವೇಳೆಯಲ್ಲಿ ಮದುವೆಮಾಡುವ ಇಚ್ಛೆ ಯಾರಿಗಿರುವದಿಲ್ಲ? ಆದರೆ ಈ ಇಚ್ಛೆಯ ಪೂರ್ತಿಯು ಆಗುವ ಬಗೆ ಹೇಗೆ?

ನನ್ನನ್ನೇ ನೋಡು. ಒಳ್ಳೇ ಮನೆತನದ ವರನಿಗೆ ನನ್ನ ಮಗಳನ್ನು ಹೇಗೆ ಕೊಡಬಲ್ಲೆ? ಹುಡುಗಿ ದೊಡ್ಡವಳಾಗಿದ್ದಾಳೆ, ಮದುವೆ ಮಾಡೆಂದು ಸಮಾಜದ ಮುಖಂಡರು ಹೇಳುತ್ತಾರೆ. ಆದರೆ ಯಾವ ತಾಯಿಯ ಮಗನೂ ಈ ಕಾರ್ಯದಲ್ಲಿ ನೆರವಾಗಲು ಮುಂದೆ ಬರುವದಿಲ್ಲ. ಇರುವ ದೊಂದು ಮನೆಯನ್ನು ಅಡವು ಇಟ್ಟುಬಿಟ್ಟೆ. ಎರಡು ದಿನಗಳ ಮೇಲೆ ಮಕ್ಕಳುಮರಿಗಳೊಡನೆ ಬೀದಿಯ ಮೇಲೆ ನಿಲ್ಲುವ ಹೊತ್ತು ಬರುವದು. ಪ್ರತಿಯೊಬ್ಬರೂ ನೋಡಿ ಚಪ್ಪಾಳೆಯನ್ನಿಕ್ಕುವರು; ಅದೆಲ್ಲವನ್ನೂ ಸಹಿಸ ಬೇಕಾಗುವದು. ಆಗ ಸಮಾಜದ ಯಾವ ಮುಖಂಡನೂ 'ನಡೆಯಿರಿ, ನಮ್ಮ ಮನೆಯಲ್ಲಿ ಸುಖವಾಗಿರಿ' ಎಂದು ಎರಡು ಮೃದುನುಡಿಗಳನ್ನೂ ಆಡುವದಿಲ್ಲ. ಅಹುದೋ ಅಲ್ಲವೋ?"

ಗಿರೀಂದ್ರನು ಮೌನದಿಂದ ಒಪ್ಪಿಗೆಯನ್ನೀಯುತ್ತಿದ್ದ. ಗುರು ಚರಣರು ಹಾಗೆಯೇ ಮಾತನ್ನು ಮುಂದುವರಿಸುತ್ತ, "ನೀನು ಹೇಳು ವದು ನಿಜವು ಗಿರೀಂದ್ರ. ಇಂತಹ ಸಮಾಜದಲ್ಲಿ ಇದ್ದುಕೊಂಡು ಅದರ ಆಜ್ಞೆಯನ್ನು ಪಾಲಿಸುತ್ತ ಜೀವಿಸುವದಕ್ಕಿಂತ ಅದನ್ನು ತ್ಯಜಿಸುವದು ಸಾವಿರ ಪಾಲು ಮಿಗಿಲಾದುದು. ಈ ಕಪಟೀಪ್ರಪಂಚದ ಪಂಜರದೊಳಗಿಂದ ಪಾರಾಗುವದರಲ್ಲಿಯೇ ಪರಮಾರ್ಥವಿದೆ. ಮಧ್ಯಾಹ್ನಕ್ಕೆ ಎರಡು ತುತ್ತು ಅನ್ನ ಸಿಕ್ಕಲಿ ಅಥವಾ ಸಿಕ್ಕದೇ ಹೋಗಲಿ, ಶಾಂತಿಯಿಂದ ಒಂದೆರಡು ದಿನಗಳನ್ನಾದರೂ ಕಳೆಯಬಹುದು. ಆದರೆ ಗಿರೀಂದ್ರ, ಯಾವ ಸಮಾಜವು ದೀನ ದುಃಖಿಗಳ, ದರಿದ್ರರ ದುಃಖವನ್ನು ದೂರಮಾಡುವ ಯತ್ನವನ್ನು ಮಾಡದೋ, ಸಂಕಟಸಮಯದಲ್ಲಿ ಸಹಾಯ ಮಾಡಿ ಹುರುಪುಗೊಡುವದಿಲ್ಲವೋ ಮತ್ತು ಎಲ್ಲ ಅತ್ಯಾಚಾರಗಳನ್ನು ನೋಡುತ್ತ ಆನಂದಪಡುವದೋ, ಬಡವರ ಕತ್ತನ್ನು ಕತ್ತರಿಸಲು ಸದಾ ಸನ್ನದ್ಧ ವಾಗಿರುವದೋ ಅಂತಹ ಸಮಾಜದಲ್ಲಿ ನನಗೆ ಸ್ಥಾನವಿಲ್ಲ. ಆ ಸಮಾಜ ದಲ್ಲಿ ನನ್ನಂತಹ ಬಡವರಿಗೆ, ದೀನರಿಗೆ, ದುಃಖಿಗಳಿಗೆ ಒಂದಂಗುಲ ಸ್ಥಳವಿಲ್ಲ. ಶ್ರೀಮಂತರಿಗೆ, ದೊಡ್ಡ ಅಧಿಕಾರಿಗಳಿಗೆ ಯಥೇಷ್ಟ ಸ್ಥಾನ ವಿದೆ. ಅವರೇ ಅದರಲ್ಲಿ ಸುಖವಾಗಿ ವಾಸಮಾಡಿಕೊಂಡಿರಲಿ. ಅದರ

ಪರಿವೆ ನಮಗೇಕೆ ?" ಎನ್ನುತ್ತ ತಮ್ಮಷ್ಟಕ್ಕೆ ತಾವೇ ಸುಮ್ಮನಾಗುತ್ತಿದ್ದರು.

ಯುಕ್ತಿಯುಕ್ತವಾದ ಈ ಉದಾರವಚನಗಳನ್ನು ಪ್ರಾಯಃ ದಿನಾಲು ಲಲಿತೆಯು ಕೇಳುತ್ತಿದ್ದಳು. ಇಷ್ಟೇ ಅಲ್ಲ, ರಾತ್ರಿ ನಿದ್ರೆ ಬರುವವರೆಗೂ ಹಾಸಿಗೆಯ ಮೇಲೆ ಮಲಗಿಕೊಂಡೇ ಚರ್ಚಿಸಿದ ವಿಷಯಗಳನ್ನು ಪುನಃ ತನ್ನ ಬುದ್ಧಿಯ ಒರೆಗಲ್ಲಿಗೆ ತಿಕ್ಕಿ ನೋಡುತ್ತಿದ್ದಳು. ಪ್ರತಿಯೊಂದು ವಾಕ್ಯವೂ ಆಕೆಯ ಹೃದಯದ ಮೇಲೆ ಅಂಕಿತವಾಗುತ್ತಿತ್ತು. ಗಿರೀಂದ್ರನ ನುಡಿಗಳೆಲ್ಲವೂ ನ್ಯಾಯಸಂಗತವಾದವೆಂದು ಅವಳಿಗೆನಿಸುತ್ತಿತ್ತು.

ಮಾವನ ಮೇಲೆ ಲಲಿತೆಯ ಪ್ರೀತಿಯು ಅಪಾರವಾಗಿತ್ತು. ಮಾವನ ಪಕ್ಷಗಟ್ಟಿ ಆಡುವ ಗಿರೀಂದ್ರನ ಮಾತುಗಳೆಲ್ಲವೂ ನಿತಾಂತ ಸತ್ಯವೆಂದು ಅವಳಿಗೆನಿಸುತ್ತಿತ್ತು. ಇತ್ತೀಚೆಗಂತೂ ಮಾವನಿಗೆ ಲಲಿತೆಯ ಚಿಂತೆಯೇ ಚಿಂತೆ. ಅವಳ ವಿಷಯವಾಗಿಯೆ ಯೋಚಿಸುತ್ತಿದ್ದಾರೆ. ಒಂದೂ ಬಗೆ ಹರಿಯಲೊಲ್ಲದು. ಅತ್ಯಂತ ಕಠಿನವಾದ ಕರ್ತವ್ಯದ ಹೊರೆಯಿಂದ ಉದ್ವಿಗ್ನರಾಗಿ ಊಟಉಡಿಗೆಗಳನ್ನು ಬಿಟ್ಟುಬಿಟ್ಟಿದ್ದಾರೆ. ಅವಳಿಗೆ ಆಶ್ರಯವನ್ನು ಕೊಟ್ಟಿದ್ದರಿಂದಲೇ ಈವಾಗ ಅವಳ ಮಾವನು ಅತಿಯಾಗಿ ವ್ಯಥೆಪಡುತ್ತಿದ್ದಾನೆ! ಆದರೆ ಇದೆಲ್ಲವೂ ಯಾರಿಗೋಸ್ಕರ? ಏತಕ್ಕೋಸ್ಕರ? ಅವಳ ಮದಿವೆಯನ್ನು ಬೇಗನೇ ಮಾಡದಿದ್ದರೆ ಮಾವನಿಗೆ ಏಕೆ ಜಾತಿಯ ಬಹಿಷ್ಕಾರ ಹಾಕಬೇಕು? ಅವರನ್ನು ಏಕೆ ಜಾತಿಯಿಂದ ಭ್ರಷ್ಟ ಮಾಡಬೇಕು? ಲಲಿತೆಯು ಯೋಚಿಸತೊಡಗಿದಳು. "ಇವತ್ತು ನನ್ನ ಮದಿವೆಯಾಯಿತು. ಆದರೆ ದೈವಸಂಯೋಗದಿಂದ ನಾಳೆಯೇ ವಿಧವೆಯಾಗಿ ಇದೇ ಮನೆಗೆ ಹಿಂತಿರುಗಿದರೆ ಮಾವನು ಜಾತಿಭ್ರಷ್ಟನಾಗುವದಿಲ್ಲವೇ? ಈ ಎರಡೂ ಪರಿಸ್ಥಿತಿಗಳಲ್ಲಿ ಅಂತರವಿದೆಯೆ? ಇಲ್ಲ, ಎಳ್ಳಷ್ಟೂ ಇಲ್ಲ."

ಇವೆಲ್ಲ ಯುಕ್ತಿಗಳು ಗಿರೀಂದ್ರನವು. ಅವನ ಈ ನುಡಿಗಳ ಪ್ರತಿಧ್ವನಿಯು ಅವಳ ಭಾವಾತುರವಾದ ಹೃದಯದ ಅಂತರಾಳದಲ್ಲಿ

ಏಳುತ್ತಿತ್ತು. ಮಲಗುವ ಪೂರ್ವದಲ್ಲಿ ವಿಷಯವನ್ನು ಪರ್ಯಾಲೋಚಿಸಿ ಮಲಗುತ್ತಿದ್ದಳು.

ಮಾನವ ಪಕ್ಷಗಟ್ಟಿ ಸಹಾನುಭೂತಿಯಿಂದ ಮಾತನಾಡಿದವರನ್ನೆಲ್ಲ ಅವಳು ಭಕ್ತಿಯಿಂದ ಆದರದಿಂದ ನೋಡುತ್ತಿದ್ದಳು. ಅವರ ಪಕ್ಷವನ್ನು ಸಮರ್ಥಿಸುತ್ತಿದ್ದಳು. ಇದಕ್ಕೂ ಹೆಚ್ಚಾಗಿ ಅವಳು ಏನು ಮಾಡಬಲ್ಲಳು? ಅತಃ ಅವಳ ಅಂತಃಕರಣದಲ್ಲಿ ಗಿರೀಂದ್ರನ ಬಗ್ಗೆ ಶ್ರದ್ಧೆಯು ಉತ್ಪನ್ನವಾಯಿತು. ಅವನನ್ನು ಆದರದಿಂದ ನೋಡಲಾರಂಭಿಸಿದಳು.

ಬರುಬರುತ್ತ ಅವಳೂ ಗುರುಚರಣರಂತೆ ಸಾಯಂಕಾಲ ಟೀಸಮಯದ ನಿರೀಕ್ಷಣೆ ಮಾಡಲಾರಂಭಿದಳು. ಅದಕ್ಕಾಗಿ ಅತ್ಯಂತ ಉತ್ಸುಕಳಾಗಿರಲಾರಂಭಿಸಿದಳು.

ಮೊದಮೊದಲು ಗಿರೀಂದ್ರ ಲಲಿತೆಯೊಡನೆ ಮಾತನಾಡುವಾಗ "ತಾವು" ಎಂದು ಅವಳನ್ನು ಸಂಬೋಧಿಸುತ್ತಿದ್ದ. ಒಂದು ದಿವಸ ಗುರುಚರಣರು "ನೀನು" ಎಂದು ಕರೆಯಲು ಹೇಳಿದರು. ಅಂದಿನಿಂದಲೇ ಗಿರೀಂದ್ರ "ತಾವು" ಎನ್ನುವದನ್ನು ಬಿಟ್ಟು ಲಲಿತೆಗೆ "ನೀನು" ಎನ್ನಲಾರಂಭಿಸಿದ.

ಒಂದು ದಿನ "ಲಲಿತಾ, ನೀನು ಟೀ ಕುಡಿಯುವದಿಲ್ಲವೆ?" ಎಂದ ಗಿರೀಂದ್ರ.

ಲಲಿತೆಯು ಕತ್ತು ಅಲ್ಲಾಡಿಸಿದಳು. ಗುರುಚರಣರೇ ಅವಳ ಪರವಾಗಿ ಉತ್ತರವನ್ನಿತ್ತರು: "ಅವಳ ಶೇಖರಣ್ಣಾನು ಟೀ ಕುಡಿಯಬಾರದೆಂದು ಹೇಳಿದ್ದಾನೆ. ಹೆಂಗಸರು ಟೀ ಕುಡಿಯುವದು ಅವನಿಗೆ ಸರಿಬರುವದಿಲ್ಲ."

ಈ ಮಾತುಗಳಿಂದ ಗಿರೀಂದ್ರನಿಗೆ ಸಂತೋಷವಾಗಲಿಲ್ಲವೆನ್ನುವದು ಲಲಿತೆಗೆ ಗೊತ್ತಾಯಿತು.

ಇವತ್ತು ಶನಿವಾರ. ಆದುದರಿಂದಲೇ ಬಹಳ ಸಮಯದ ವರೆಗೆ ಕುಳಿತು ವಿಷಯಗಳನ್ನು ಚರ್ಚಿಸುತ್ತಿದ್ದರು. ಬೇಗನೇ ಟೀ ಕುಡಿದು

ಚರ್ಚೆಗೆ ಮೊದಲುಮಾಡಿದರು. ಗುರುಚರಣರಿಗೆ ಏಕೋ ಏನೋ ಇಂದಿನ ಚರ್ಚೆಯಲ್ಲಿ ಅಷ್ಟೊಂದು ಉತ್ಸಾಹವಿರಲಿಲ್ಲ. ಮಧ್ಯಮಧ್ಯದಲ್ಲಿ ಎತ್ತೋ ಅವರ ಮನಸ್ಸು ಹರಿದುಹೋಗುತ್ತಿತ್ತು. ಮತ್ತು ಅವರು ಸುಮ್ಮನಾಗುತ್ತಿದ್ದರು.

ಅವರ ಚಂಚಲತೆಯನ್ನು ನೋಡಿ "ಇವತ್ತು ನಿಮ್ಮ ಮನಸ್ಸಿನಲ್ಲಿ ನೆಮ್ಮದಿ ಇಲ್ಲವೆಂಬಂತೆ ತೋರುತ್ತೆ" ಎಂದ ಗಿರೀಂದ್ರ.

ಹುಕ್ಕಾ ಕುಡಿಯುವುದನ್ನು ನಿಲ್ಲಿಸಿ "ದೇಹಸ್ಥಿತಿ ಸರಿಯಾಗಿ ಇದೆಯಲ್ಲ? ಏಕೆ?" ಎಂದರು.

ಗಿರೀಂದ್ರ ಸ್ವಲ್ಪ ಸಂಕೋಚದಿಂದ "ಇವತ್ತು ಕಚೇರಿಯಲ್ಲಿ ..." ಎಂದ.

"ಇಲ್ಲ, ಇಲ್ಲ. ಹಾಗೇನೂ ಇಲ್ಲ" ಎನ್ನುತ್ತ ಆಶ್ಚರ್ಯದಿಂದ ಗುರುಚರಣರು ಗಿರೀಂದ್ರನ ಮುಖವನ್ನು ನೋಡಿದರು. ಅಂತರಂಗದ ಬೆದರಿಕೆ ಮತ್ತು ಚಿಂತೆಯ ಚಿಹ್ನೆ ಮುಖದ ಮೇಲೆ ಮಿಂಚುತ್ತಿರುವುದನ್ನುವದರ ಪರಿವೆಯೇ ಈ ಸರಳ ಸ್ವಭಾವದ ಮನುಷ್ಯನಿಗೆ ಇದ್ದಿಲ್ಲ.

ಮೊದಮೊದಲು ಲಲಿತೆ ಒಂದು ತುಟಿ ಎರಡುಮಾಡದೆ ಕುಳಿತುಕೊಂಡು ಆಲಿಸುತ್ತಿದ್ದಳು. ಆದರೆ ಈಪೊತ್ತು ಮಧ್ಯಮಧ್ಯದಲ್ಲಿ ಒಂದೆರಡು ಮಾತು ಆಡಲು ಮೊದಲುಮಾಡಿದ್ದಳು. "ಹೌದು ಮಾವ. ನಿಮ್ಮ ಆರೋಗ್ಯ ಈಪೊತ್ತು ಸರಿಯಾಗಿಲ್ಲ" ಎಂದಳು.

ಗುರುಚರಣರು ನಕ್ಕು ನುಡಿದರು: "ಅಹುದು ಮಗೂ, ನೀನು ಸರಿಯಾಗಿ ಕಂಡುಹಿಡಿದೆ. ಈಪೊತ್ತು ನಿಜವಾಗಿಯೂ ನನ್ನ ಮನಸ್ಸು ಸರಿಯಾಗಿಲ್ಲ."

ಲಲಿತೆ ಮತ್ತು ಗಿರೀಂದ್ರ ಇಬ್ಬರೂ ಅವರ ಮುಖವನ್ನು ನೋಡತೊಡಗಿದರು.

"ನವೀನರಾಯರಿಗೆ ನನ್ನ ಪರಿಸ್ಥಿತಿಯೆಲ್ಲಾ ಗೊತ್ತಿದೆ. ಆದರೂ ಈಪೊತ್ತು ಬೀದಿಯಲ್ಲಿ ನಿಂತು ನನಗೆ ಎರಡು ಬಿರುನುಡಿಗಳನ್ನಾಡಿದರು. ಅವರದೇನು ತಪ್ಪು ಇದರಲ್ಲಿ? ೫—೬ ತಿಂಗಳಾದವು, ಒಂದು ಕಾಸು

ಕೂಡ ಬಡ್ಡಿಯನ್ನು ಕೊಟ್ಟಿಲ್ಲ. ಅಸಲು ತೀರಿಸುವದಂತೂ ದೂರದ ಮಾತು" ಎಂದರು ಗುರುಚರಣರು ದುಃಖದಿಂದ.

ಸರ್ವ ಸಂಗತಿಯು ಲಲಿತೆಗೆ ತಿಳಿಯಿತು. ಅವಳು ಮಾತಿನ ಪ್ರವಾಹವನ್ನು ಇನ್ನೊಂದೆಡೆ ಹೊರಳಿಸಲು ಹಾತೊರೆಯತೊಡಗಿದಳು. ಯಾರ ಎದುರಿಗೆ ಯಾವ ಯಾವ ಮಾತು ಆಡಬೇಕು ಆಡಬಾರದೆನ್ನುವದು ತನ್ನ ಸರಳ ಸ್ವಭಾವದ ಮಾವನಿಗೆ ಗೊತ್ತಿಲ್ಲ. ತನ್ನ ಮನೆಯ ಮಾತು ಪರರ ಎದುರಿಗೆ ಹೇಳುವದು ಎಷ್ಟು ಹಾಸ್ಯಾಸ್ಪದವಾದುದು ಎನ್ನುವದನ್ನೆಲ್ಲಾ ಅವಳು ಚಿಕ್ಕವಳಾದರೂ ಅರಿತವಳಾಗಿದ್ದಳು. ಆದುದರಿಂದಲೇ ಅವಳು ಅವರನ್ನು ಮುಂದಕ್ಕೆ ಮಾತನಾಡಗೊಡದೆ "ಮಾವ, ಇದಕ್ಕೋಸ್ಕರ ಇಷ್ಟೇಕೆ ಚಿಂತೆ? ನಾಳೆ ಮತ್ತೆ ಮಾತನಾಡೋಣ" ಎಂದಳು.

ಆದರೆ ಈ ಮಾತಿನ ಕಡೆ ಗುರುಚರಣರ ಲಕ್ಷ್ಯವು ಹೋಗಲಿಲ್ಲ. ಶೋಕದಿಂದ ಅತ್ಯಂತ ಭಾರವಾದ ಒಮ್ಮೆ ಉಸಿರುಗರೆದು ನಕ್ಕು "ಗಿರೀಂದ್ರ! ನನ್ನ ಈ ಮಗು ನಾನು ಚಿಂತಿಸಬಾರದೆಂದು ಬಯಸುತ್ತೆ. ಆದರೆ ಲಲಿತಾ! ನಿನ್ನ ಈ ದುಃಖಿಯಾದ ದರಿದ್ರ ಮಾವನ ಕಡೆಗೆ ಯಾರೂ ಕಣ್ಣೆತ್ತಿ ನೋಡುವದಿಲ್ಲ!" ಎಂದರು.

"ನವೀನರಾಯರು ಈವೊತ್ತು ಏನೆಂದರು?" ಎಂದು ಗಿರೀಂದ್ರ ಕೇಳಿದ.

ತನ್ನ ಮನೆಯ ಒಳಗಿನ ಹಾಗೂ ಹೊರಗಿನ ಪರಿಸ್ಥಿತಿ ಎಲ್ಲವೂ ಗಿರೀಂದ್ರನಿಗೆ ಗೊತ್ತಿದೆ ಎನ್ನುವದು ಲಲಿತೆಗೆ ಗೊತ್ತಿರಲಿಲ್ಲ. ಗೊತ್ತಿರುವದಾದರೂ ಹೇಗೆ? ಆದುದರಿಂದಲೇ ಗಿರೀಂದ್ರನ ಈ ಪ್ರಶ್ನೆಯು ಅಸಂಗತವಾದುದೆಂದು ಭಾವಿಸಿ, ಮನದಲ್ಲಿಯೇ ಅವನ ಮೇಲೆ ಸಿಟ್ಟಾದಳು.

"ನವೀನರಾಯರ ಹೆಂಡತಿ ಬಹಳ ದಿನಗಳಿಂದ ಅಜೀರ್ಣ ರೋಗದಿಂದ ಬಳಲುತ್ತಿದ್ದಾರೆ. ಅವರು—ಭುವನೇಶ್ವರೀದೇವಿಯವರು—ಬಹು ಸಹನೆಯುಳ್ಳವರು. ಎಷ್ಟೋ ಕಾಲದಿಂದ ರೋಗವನ್ನು

ಅನುಭವಿಸುತ್ತಿದ್ದಾರೆ, ಅದರಿಂದಾಗುವ ದುಃಖವನ್ನು ಸಹಿಸುತ್ತಿದ್ದಾರೆ. ಆದರೆ ಆ ರೋಗ ಈಗ ಬಲಿತುಬಿಟ್ಟಿದೆ. ಆದುದರಿಂದ ಮೊನ್ನೆ ಅವರ ಮನೆಗೆ ಡಾಕ್ಟರುಗಳು ಬಂದಿದ್ದರು. ಪರೀಕ್ಷೆ ಮಾಡಿ ಈ ಊರು ಬಿಟ್ಟು, ಒಳ್ಳೇ ಹವೆಯುಳ್ಳ ಊರಿಗೆ ಅವರನ್ನು ಕಳಿಸಬೇಕೆಂದು ಸಲಹೆಯನ್ನಿತ್ತಿದ್ದಾರೆ. ಅದಕ್ಕೋಸ್ಕರ ನವೀನರಾಯರು ತಮ್ಮ ಹೆಂಡತಿಯನ್ನು ಒಂದು ಒಳ್ಳೆಯ ಆರೋಗ್ಯವರ್ಧಕ ಹವೆಯುಳ್ಳ ಸ್ಥಾನಕ್ಕೆ ಕಳಿಸಿಕೊಡುವ ಏರ್ಪಾಡು ಮಾಡಬೇಕು. ಈವಾಗ ಅವರಿಗೆ ಹಣವು ಬೇಕಾಗಿದೆ. ಆದುದರಿಂದಲೇ ಈವೊತ್ತು ಅವರು ಬೇಗನೇ ಹಣ ಕೊಡೆಂದು ನನ್ನನ್ನು ಕೇಳಿದರು. ಬಡ್ಡಿ ಮತ್ತು ಅಸಲಿನಲ್ಲಿ ಸ್ವಲ್ಪ ಹಣ ಈವೊತ್ತು ಕೊಡಲೇ ಬೇಕು, ಅನ್ಯತ್ರ ಜೀವ ಅಡವು ಇಟ್ಟಾದರೂ ಕೊಡಲೇ ಬೇಕೆಂದು ಒತ್ತಾಯಪಡಿಸಿದರು.” ಇಂತು ತಮ್ಮ ಕರುಣಕಥೆಯನ್ನು ಗುರುಚರಣರು ಹೇಳಿದರು.

ಗಿರೀಂದ್ರನ ಹೃದಯವು ಕರಗಿ ನೀರಾಯಿತು. ಸ್ವಲ್ಪ ಹೊತ್ತು ಸುಮ್ಮನಿದ್ದು ಕೋಮಲ ಕಂಠದಿಂದ “ನೋಡಿ, ನಾನು ತಮ್ಮಲ್ಲಿ ಒಂದು ವಿಷಯ ಅರಿಕೆಮಾಡಿಕೊಳ್ಳಬೇಕೆಂದಿದ್ದೇನೆ. ಎಷ್ಟೋ ದಿವಸಗಳಿಂದ ಹೇಳಬೇಕೆಂದು ಮನಸ್ಸಿನಲ್ಲಿತ್ತು. ಈವಾಗ ಯೋಗ್ಯ ಸಮಯವೂ ಅದಕ್ಕೆ ಬಂದಂತೆ ತೋರುತ್ತೆ. ತಮಗೆ ಕೆಡಕೆನಿಸದಿದ್ದರೆ, ತಮ್ಮ ಅಪ್ಪಣೆಯಾದರೆ ಹೇಳುವೆ” ಎಂದ ಗಿರೀಂದ್ರ.

“ಸಂಕೋಚವೇಕೆ, ಹೇಳು ಗಿರೀಂದ್ರ. ನನ್ನೊಡನೆ ಯಾರೂ ಸಂಕೋಚದಿಂದ ಮಾತನಾಡುವದಿಲ್ಲ, ನಾನೂ ಯಾರೊಡನೆಯೂ ಸಂಕೋಚದಿಂದ ಮಾತನಾಡುವದಿಲ್ಲ. ಹೇಳು, ಏನು ಹೇಳಬೇಕೆನ್ನುತ್ತೀಯಾ?” ಗುರುಚರಣರು ನಗುತ್ತ ನುಡಿದರು.

“ನನ್ನ ಅಕ್ಕನೂ ಒಂದು ದಿನ ನವೀನರಾಯರು ವಿಪರೀತ ಬಡ್ಡಿಯನ್ನು ತೆಗೆದುಕೊಳ್ಳುತ್ತಾರೆಂದು ಹೇಳಿದಳು. ತಾವು ಇಷ್ಟು ಬಡ್ಡಿಯನ್ನು ಅವರಿಗೇಕೆ ಕೊಡಬೇಕು, ಎಂದು ವಿಚಾರವಾಗಿದೆ. ನಾನು ತಮ್ಮಲ್ಲಿ ಬಿನ್ನವಿಸಿಕೊಳ್ಳುವದು ಇಷ್ಟೆ. ನನ್ನ ಹತ್ತಿರ ಸಾಕಷ್ಟ

ಹಣವಿದೆ. ಯಾವ ಕೆಲಸದಲ್ಲಿಯೂ ಅದನ್ನು ತೊಡಗಿಸಿಲ್ಲ; ಇತ್ತ ನವೀನ ರಾಯರಿಗೆ ಹಣವು ಬೇಕಾಗಿದೆ. ಅವರು ತಮ್ಮನ್ನು ಪೀಡಿಸುತ್ತಿದ್ದಾರೆ. ನಾನು ನಿಮಗೆ ಹಣ ಕೊಡುತ್ತೇನೆ. ಅವರಿಗೆ ಅವರ ಹಣವನ್ನೆಲ್ಲ ಕೊಟ್ಟು ಸಾಲದ ಭಾರವನ್ನು ಏಕೆ ಇಳಿಸಿಕೊಳ್ಳಬಾರದು ತಾವು ?" ಎಂದ ಗಿರೀಂದ್ರ.

ಲಲಿತೆಗೆ ವಿಸ್ಮಯ, ಗುರುಚರಣರಿಗೆ ಅತ್ಯಂತ ಆಶ್ಚರ್ಯ ಆಯಿತು. ಇಬ್ಬರೂ ಗಿರೀಂದ್ರನ ಮುಖವನ್ನು ಒಂದೇ ಸಮನೆ ನೋಡಲಾರಂಭಿಸಿದರು. ಅವನು ಸ್ವಲ್ಪ ಸಂಕೋಚದಿಂದ "ತಮಗೆ ಅನುಕೂಲವಾದಾಗ ರೂಪಾಯಿಗಳನ್ನು ತಿರುಗಿ ಕೊಡಿ. ನನಗೆ ಬೇಗನೇ ರೂಪಾಯಿಗಳು ಬೇಕಾಗುವದೇ ಇಲ್ಲ. ಈವಾಗ ನವೀನರಾಯರಿಗೂ ರೂಪಾಯಿಗಳು ಬೇಕಾಗಿರುವದರಿಂದ ಹೇಳುತ್ತಿದ್ದೇನೆ, ಇಲ್ಲನಾದರೆ—"ಎಂದ.

"ಎಲ್ಲ ಹಣವನ್ನು ನೀನೇ ಕೊಡುವಿಯಾ ?"

ಗಿರೀಂದ್ರ ಭೂಮಿಯ ಕಡೆ ನೋಡುತ್ತ "ಹಾಂ ಎಲ್ಲ ರೂಪಾಯಿಗಳನ್ನು ಕೊಡುತ್ತೇನೆ. ಅಡಚಣೆ ಇದ್ದ ಕಾಲವಲ್ಲಿಯೇ ಕೊಟ್ಟುಬಿಟ್ಟರೆ ಹೆಚ್ಚು ಅನುಕೂಲವಾಗುತ್ತೆ ಅವರಿಗೆ. ಈವಾಗಲೇ ನಾನು ತಮಗೆ ಕೊಟ್ಟರೆ ಹಣದ ಸದ್ವಿನಿಯೋಗ ಮಾಡಿದಂತೆಯೂ ಆಗುತ್ತೆ" ಎಂದ.

ಗುರುಚರಣರು ಇದಕ್ಕೆ ಉತ್ತರವನ್ನೀಯುವವರಿದ್ದರು. ಇಷ್ಟರಲ್ಲ ಅನ್ನಾಕಾಲಿಯು ಓಡುತ್ತ ಬಂದು "ಲಲಿತಕ್ಕ, ಬೇಗನೆ ಸೀರೆಯನ್ನುಟ್ಟುಕೊಂಡು ಸಿದ್ಧವಾಗಿರಲು ಹೇಳಿದ್ದಾನೆ ನಿನಗೆ ಶೇಖರಣ್ಣ. ಸಿನೇಮಾ ನೋಡಲಿಕ್ಕೆ ಹೋಗಬೇಕು" ಎಂದು ಹೇಳಿ ಮತ್ತೆ ಓಡುತ್ತ ಹೊರಟುಹೋಗಿಬಿಟ್ಟಳು. ಆ ಹುಡುಗಿಯ ಉತ್ಸಾಹ ಲವಲವಿಕೆಯನ್ನು ಕಂಡು ಗುರುಚರಣರು ನಗಲಾರಂಭಿಸಿದರು. ಲಲಿತೆಯು ಕುಳಿತಲ್ಲಿಯೇ ಕುಳಿತಿದ್ದಳು, ಆ ಸ್ಥಾನವನ್ನು ಬಿಟ್ಟು ಏಳಲಿಲ್ಲ.

ಕ್ಷಣಹೊತ್ತಿನಲ್ಲಿ ಪುನಃ ಬಂದು ಹೇಳಿದಳು ಅನ್ನಾಕಾಲಿ: "ಏನಕ್ಕ, ಇನ್ನೂ ಎದ್ದೇ ಇಲ್ಲವಲ್ಲ! ನಾವೆಲ್ಲರೂ ನಿಮ್ಮ ಸಲುವಾಗಿ ದಾರೀ ಕಾಯುತ್ತಿದ್ದೇವೆ."

ಲಲಿತೆಗೆ ಏಳಲು ಮನಸ್ಸಾಗಲಿಲ್ಲ. ಕೊನೆಯ ವರೆಗೂ ಮಾತು ಕೇಳಿ ಹೋಗಬೇಕೆನ್ನುತ್ತಾಳೆ. ಗುರುಚರಣರು ಕಾಲಿಯ ಕಡೆ ನೋಡಿ, ಲಲಿತೆಯ ತಲೆಯ ಮೇಲೆ ಕೈಯಿಟ್ಟು, ಪ್ರೀತಿಯಿಂದ ನಸುನಕ್ಕು "ಹೋಗು ಮಗೂ, ತಡಮಾಡಬೇಡ. ನಿನಗೋಸ್ಕರವೇ ಎಲ್ಲರೂ ದಾರೀಕಾಯುತ್ತ ನಿಂತಿರುವಂತೆ ತೋರುತ್ತೆ" ಎಂದರು.

ಈವಾಗ ಲಲಿತೆಯು ಏಳಲೇಬೇಕಾಯಿತು. ಹೋಗುವ ಮುಂಚೆ ಗಿರೀಂದ್ರನನ್ನು ಕೃತಜ್ಞತಾಸೂಚಕ ದೃಷ್ಟಿಯಿಂದ ನೋಡಿದಳು. ಇದನ್ನು ಗಿರೀಂದ್ರನೂ ನೋಡಿದ.

ಹತ್ತು ಹನ್ನೆರಡು ನಿಮಿಷಗಳು ಕಳೆದುಹೋದ ಮೇಲೆ ಲಲಿತೆಯು ವಸ್ತ್ರಾಲಂಕಾರಭೂಷಿತೆಯಾಗಿ ಎಲೆಅಡಿಕೆಯನ್ನು ಕೊಡುವ ನೆವ ದಿಂದ ಪುನಃ ಅಲ್ಲಿಗೆ ಬಂದಳು.

ಗಿರೀಂದ್ರ ಹೊರಟುಹೋಗಿದ್ದ. ಗುರುಚರಣರೊಬ್ಬರೇ ದಿಂಬಿಗೆ ಒರಗಿ, ಕಣ್ಣುಮುಚ್ಚಿಕೊಂಡು ಮಲಗಿದ್ದರು. ಅವರ ನೇತ್ರಗಳಿಂದ ನೀರು ಹರಿಯುತ್ತಿತ್ತು. ಅವು ಆನಂದಾಶ್ರುಗಳೆಂದೇ ಲಲಿತೆಯು ಭಾವಿಸಿ ದಳು. ಮಾವನನ್ನು ಅದೇ ಅವಸ್ಥೆಯಲ್ಲಿ ಬಿಟ್ಟು ಬಂದಹಾಗೆಯೇ ಮೆಲ್ಲನೆ ಹೋಗಿಬಿಟ್ಟಳು.

ಲಲಿತೆಯು ಶೇಖರನ ಮನೆಗೆ ಹೋದಳು. ಅವಳ ಕಣ್ಣುಗಳ ಲ್ಲಿಯೂ ಕಂಬನಿಗಳು ತುಂಬಿದ್ದವು. ಅನ್ನಾಕಾಲಿಯು ಅಲ್ಲಿರಲಿಲ್ಲ, ಎಲ್ಲರಿಗಿಂತ ಮೊದಲೇ ಗಾಡಿಯಲ್ಲಿ ಕುಳಿತುಕೊಂಡಿದ್ದಳು. ಶೇಖರನು ಒಬ್ಬನೇ ತನ್ನ ರೂಮಿನಲ್ಲಿ ನಿಂತುಕೊಂಡಿದ್ದ. ಬಹುಶಃ ಲಲಿತೆಯನ್ನೇ ನಿರೀಕ್ಷಿಸುತ್ತಿರಬಹುದು. ಇಷ್ಟರಲ್ಲಿ ಲಲಿತೆಯು ಚಕ್ಷುಗಳಲ್ಲಿ ಅಶ್ರು ಗಳನ್ನು ತುಂಬಿಕೊಂಡು ಅಲ್ಲಿಗೆ ಬಂದಳು. ಅವಳನ್ನು ನೋಡುತ್ತಲೇ, ಅವಳ ಕಣ್ಣುಗಳಲ್ಲಿ ಕಂಬನಿಗಳನ್ನು ಕಂಡಾಕ್ಷಣವೇ ಎಂಟು ಹತ್ತು ದಿನ ಲಲಿತೆಯು ಬರದೇ ಇದ್ದುದರಿಂದ ಉಂಟಾದ ಅವನ ಕೋಪ ಎಲ್ಲಿಯೋ ಮಾಯವಾಯಿತು. ಅವನು ಹಿಂದಿನದೆಲ್ಲವನ್ನು ಮರೆತು ಗಾಬರಿ ಯಿಂದ "ಇದೇನು ಲಲಿತಾ! ಕಣ್ಣಲ್ಲಿ ನೀರೇಕೆ? ಅಳುತ್ತೀ ಏಕೆ?" ಎಂದ.

ಲಲಿತೆಯು ಕತ್ತು ಬಾಗಿಸಿಕೊಂಡು ನೆಲವನ್ನು ನೋಡುತ್ತ ನಿಂತಳು. ಮಾತನಾಡಲಿಲ್ಲ. ವೇಗದಿಂದ ತಲೆಯಲ್ಲಾಡಿಸಿದಳು.

ಇತ್ತ ಕೆಲವು ದಿನಗಳಿಂದ ಶೇಖರನು ಲಲಿತೆಯನ್ನು ಕಂಡಿದ್ದಿಲ್ಲ. ಅವನ ಹೃದಯದಲ್ಲಿ ಪರಿವರ್ತನೆಯಾಗಲಾರಂಭಿಸಿತ್ತು. ಆದುದರಿಂದಲೇ ಅವನು ಅವಳ ಸಮೀಪಕ್ಕೆ ಹೋದ. ಅವಳ ಎರಡೂ ಕೆನ್ನೆಗಳನ್ನು ತನ್ನ ಎರಡೂ ಕೈಗಳಿಂದ ಹಿಡಿದೆತ್ತಿ ಮುಖವನ್ನು ನೋಡಿದ. ತನ್ನ ಎರಡೂ ಕಣ್ಣುಗಳನ್ನು ಅವಳ ಎರಡೂ ಕಣ್ಣುಗಳ ಹತ್ತಿರ ಒಯ್ದು ಸರಿಯಾಗಿ ನೋಡಿದ. "ಅಹುದು, ನಿಜವಾಗಿಯೂ ನೀನು ಅಳುತ್ತಿದ್ದೀಯಾ, ಹೇಳು ಏನಾಯಿತು?" ಎಂದ.

ಲಲಿತೆಯ ದುಃಖವು ಉಕ್ಕಿಬಂತು. ಅದನ್ನು ಹೆಚ್ಚು ಹೊತ್ತು ತಡೆಯುವುದಾಗಲಿಲ್ಲ. ಅಲ್ಲಿಯೇ, ನಿಂತಲ್ಲಿಯೇ ಕುಳಿತುಬಿಟ್ಟಳು. ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

೭

ನವೀನರಾಯರು ಲೆಕ್ಕಮಾಡಿ, ಎಣಿಸಿ ಎಣಿಸಿ ರೂಪಾಯಿಗಳನ್ನು ತೆಗೆದುಕೊಂಡರು. ಒಂದು ಕಾಸು ಕೂಡ ಬಿಡಲಿಲ್ಲ. ಸಾಲವೆಲ್ಲ ಮುಟ್ಟಿದ ಬಗ್ಗೆ ರಸೀದಿಯನ್ನು ಕೊಡುತ್ತ ಗುರುಚರಣರನ್ನು ಕೇಳಿದರು.

"ಇಷ್ಟು ರೂಪಾಯಿಗಳನ್ನು ನಿಮಗೆ ಯಾರು ಕೊಟ್ಟರು?"

ಗುರುಚರಣರು ವಿನಯದಿಂದ "ದಯವಿಟ್ಟು ಈ ಮಾತು ಕೇಳಬೇಡಿ, ಹೇಳಬಾರದೆಂದು ಅಪ್ಪಣೆಯಾಗಿದೆ" ಎಂದರು.

ರೂಪಾಯಿಗಳು ವಾಪಸು ಬಂದದ್ದರಿಂದ ನವೀನರಾಯರಿಗೆ ಸಂತೋಷವಾಯಿತೋ? ಇಲ್ಲ. ರೂಪಾಯಿಗಳನ್ನೆಲ್ಲ ವಾಪಸು ಪಡೆಯಬೇಕೆಂಬ ಇಚ್ಛೆ ಅವರಿಗಿದ್ದಿಲ್ಲ. ಅದರೆ ಗುರುಚರಣರ ಮನೆಯನ್ನು ಕೈವಶಪಡಿಸಿಕೊಳ್ಳಬೇಕೆಂಬ ಇಚ್ಛೆಯು ಪ್ರಬಲವಾಗಿದ್ದಿತು. ಅಂತೆಯೇ ಅವರು ಗುರುಚರಣರ ಮನೆಯನ್ನು ಕೆಡವಿಸಿ, ಆ ಸ್ಥಳದಲ್ಲಿ ಎಂತಹ ಮನೆಯನ್ನು ಕಟ್ಟಿಸಬೇಕೆನ್ನುವದರ ಪ್ಲಾನು ಕೂಡ ಹಾಕಿಟ್ಟಿದ್ದರು. ಗುರುಚರಣರ ಉತ್ತರವನ್ನು ಕೇಳಿ ಸ್ವಲ್ಪ ಬಿಗುವಿನಿಂದ "ಹೇಳಬಾರದೆಂದು ಅಪ್ಪಣೆ ಮಾಡಿದ್ದು ಸ್ವಾಭಾವಿಕವೇ. ಹಾಗೆ ಮಾಡಬೇಕಾದದ್ದೆ.

ಗುರುಚರಣರೇ, ಇದರಲ್ಲಿ ನಿಮ್ಮದೇನೂ ದೋಷವಿಲ್ಲ, ಎಲ್ಲವೂ ನನ್ನದೇ. ನಾನು ನಿಮಗೆ ರೂಪಾಯಿಗಳನ್ನು ಬೇಗನೇ ಕೊಡಿರೆಂದು ಸ್ವಲ್ಪ ಕಠೋರವಾಗಿ ಹೇಳಿ ಪೀಡಿಸಿದೆ. ಇದು ನನ್ನ ತಪ್ಪು. ಒಪ್ಪಿಕೊಳ್ಳುತ್ತೇನೆ. ಆದರೆ ಹೀಗೆ ಮಾಡದೇ ಹೋದರೆ ಕಲಿಕಾಲದಲ್ಲಿ ಜೀವಿಸುವದು ಸ್ವಲ್ಪ ಕಷ್ಟ ಕಾಣ್ರಿ" ಎಂದರು.

ಗುರುಚರಣರು ಅತ್ಯಂತ ನೊಂದುಕೊಂಡು "ಹೀಗೇಕೆ ಮಾತನಾಡುತ್ತೀರಿ ರಾಯರೆ! ನಿಮ್ಮ ಸಾಲವನ್ನು ಮಾತ್ರ ತೀರಿಸಿದ್ದೇನೆ. ನಿಮ್ಮ ದಯೆಯ ಸಾಲ ಇನ್ನೂ ನನ್ನ ತಲೆಯ ಮೇಲೆ ಇದ್ದೇ ಇದೆ; ಅದನ್ನು ನಾನೆಂದಿಗೂ ತೀರಿಸುವಂತಿಲ್ಲ" ಎಂದರು.

ನವೀನರಾಯರು ನಗಲಾರಂಭಿಸಿದರು. ಅವರು ಮೊದಲನೇ ತರಗತಿಯ ಘಾಟಿಗಳು. ಧೂರ್ತತೆ, ಚಾತುರ್ಯ ಇಲ್ಲದೇ ಹೋಗಿದ್ದರೆ ಒಂದೇ ಒಂದು ಜಿಲ್ಲದ ವ್ಯಾಪಾರದಲ್ಲಿ ಇಷ್ಟು ಹಣವನ್ನು ಗಳಿಸುತ್ತಿದ್ದರೆ? ಅವರು "ಏನಾದರೂ ಹೇಳಿ, ಇಂದು ನೀವು ವಿಚಾರಮಾಡಿದ್ದರೆ ಈ ರೀತಿ ಎಲ್ಲ ಸಾಲವನ್ನು ತೀರಿಸುತ್ತಿರಲಿಲ್ಲ. ಮೇಲಿಂದ ಮೇಲೆ ಹೇಳುವುದೇನು? ನಾನು ನಿಮಗೆ ಬಲವಂತ ಮಾಡಿದೆ. ಅದು ನನ್ನ ತಪ್ಪು. ಪರಿಸ್ಥಿತಿಯೇ ಹಾಗೆ ಬಂತು, ಏನು ಮಾಡಲಿ ಹೇಳಿ? ನಿಮ್ಮ ಅತ್ತಿಗೆಯ ರೋಗದ ನಿವಾರಣೆಗೋಸ್ಕರ ಹೀಗೆ ಮಾಡಬೇಕಾಯಿತು. ಅದೇನೇ ಇರಲಿ. ಈವಾಗ ಎಷ್ಟು ಬಡ್ಡಿದರದಂತೆ ನಿಮ್ಮ ಮನೆಯನ್ನು ಅಡವು ಇಟ್ಟು ಹಣವನ್ನು ತೆಗೆದುಕೊಂಡಿದ್ದೀರಿ, ಹೇಳಬಾರದೆ?" ಎಂದರು.

"ರಾಯರೇ, ಮನೆಯನ್ನು ಅಡವು ಇಟ್ಟಿಲ್ಲ. ಬಡ್ಡಿಯ ಬಗ್ಗೆ ಮಾತುಕತೆಯನ್ನು ಆಡಲಿಲ್ಲ."

ನವೀನರಾಯರಿಗೆ ವಿಶ್ವಾಸವುಂಟಾಗಲಿಲ್ಲ. "ಏನು, ಹೀಗೆಯೇ ಇಷ್ಟು ರೂಪಾಯಿಗಳು ಕೈಗಡ ದೊರೆತವೆ?" ಎಂದರು.

"ಅಹುದು ರಾಯರೇ ಹೀಗೆಯೇ ಭಾವಿಸಬೇಕು. ಹುಡುಗ ಸಜ್ಜನ—ಒಳ್ಳೇ ಕರುಣಾಳು."

"ಹುಡುಗ? ಯಾವ ಹುಡುಗ?"

ಗುರುಚರಣರು ಉತ್ತರವನ್ನೀಯಲಿಲ್ಲ. ಸುಮ್ಮನಾದರು. ಇಷ್ಟು ಕೂಡ ಅವರು ಹೇಳಬಾರದಾಗಿತ್ತು. ಮಾಡುವದೇನು? ಮಾತು ತನ್ನಷ್ಟಕ್ಕೆ ತಾನೇ ಬಾಯಿಂದ ಹೊರಬಿದ್ದು ಬಿಟ್ಟಿತು.

ಗುರುಚರಣರ ಮನಸ್ಸಿನೊಳಗಿನ ಮಾತು-ಗುಟ್ಟು ನವೀನರಾಯರಿಗೆ ಗೊತ್ತಾಗಿಹೋಯಿತು. ಅವರು ನಗುತ್ತ "ಹೇಳಬಾರದೆಂದು ಅಪ್ಪಣೆಯಾಗಿದ್ದರೆ, ಹೇಳಬೇಡಿ. ಈವಾಗ ನೋಡಿ ನಾನು ಇಷ್ಟು ಮುದುಕನಾಗಿದ್ದೇನೆ. ಜಗತ್ತಿನ ರೀತಿ ನೀತಿ, ನಡತೆ ನಡಾವಳಿಯ ಅನುಭವ ನನಗೆ ಸಾಕಷ್ಟಾಗಿದೆ. ಆದುದರಿಂದಲೇ ನಾನು ನಿಮಗೆ ಎಚ್ಚರಿಕೆ ಕೊಡುತ್ತೇನೆ.— ನಿಮಗೆ ಸಹಾಯ ಮಾಡಿದವರು ಯಾರೇ ಇರಲಿ, ಸಹಾಯ ಮಾಡುತ್ತ ಮಾಡುತ್ತ ಕೊನೆಯಲ್ಲಿ ನಿಮ್ಮ ಕುತ್ತಿಗೆ ಕೊಯ್ದು ಬಿಟ್ಟಾರು, ಹುಷಾರಾಗಿರಿ" ಎಂದರು.

ಗುರುಚರಣರು ಮರುಮಾತನಾಡದೆ, ನಮಸ್ಕಾರಮಾಡಿ ರಸೀದಿಯನ್ನು ತೆಗೆದುಕೊಂಡು ಮನೆಗೆ ಹೋದರು.

ಪ್ರತಿವರ್ಷ ಈ ಮಾಸದಲ್ಲಿ ಭುವನೇಶ್ವರಿ ದೇವಿಯವರು ಸಂಯುಕ್ತ ಪ್ರಾಂತದಲ್ಲಿ ಸಂಚಾರಮಾಡುತ್ತಿದ್ದರು. ಇದರಿಂದ ಅವರ ಅಜೀರ್ಣರೋಗ ಸ್ವಲ್ಪ ಗುಣವಾಗುತ್ತಿತ್ತು. ಈ ವರ್ಷವೂ ಅದೇ ಅಜೀರ್ಣರೋಗವನ್ನು ಕಳೆದುಕೊಳ್ಳುವದಕ್ಕೆ ಅವರು ತಮ್ಮ ಊರನ್ನು ಬಿಡಬೇಕಾಗಿತ್ತು. ಆದರೆ ನವೀನರಾಯರು ಗುರುಚರಣರಿಗೆ ಹೇಳಿದಷ್ಟು ರೋಗವು ತನ್ನ ಎಲ್ಲೆಯನ್ನು ಮೀರಿ ಹೋಗಿರಲಿಲ್ಲ. ತಮ್ಮ ರೂಪಾಯಿಗಳನ್ನು ವಾಪಸು ಪಡೆದುಕೊಳ್ಳುವ ಉದ್ದೇಶದಿಂದ ರೋಗದ ಅಸಾಧ್ಯತನವನ್ನು ವಿಪರೀತ ವರ್ಣಿಸಿದ್ದರು. ಅದೇನೇ ಇರಲಿ. ನವೀನರಾಯರಿಗೆ ಗುರುಚರಣರು ರೂಪಾಯಿಗಳನ್ನು ಕೊಟ್ಟುಬಿಟ್ಟದ್ದರಿಂದ, ಸಂಯುಕ್ತಪ್ರಾಂತದ ಪ್ರವಾಸದ ಸಿದ್ಧತೆ ಆರಂಭವಾಯಿತು. ಅಂದೇ ಬೆಳಿಗ್ಗೆ ಶೇಖರ ತನ್ನ ರೂಮಿನಲ್ಲಿ ಫೇಶನ್ನಿನ ವಸ್ತುಗಳನ್ನೆಲ್ಲ ತನ್ನ ಚರ್ಮದ ಸೂಟ್‌ಕೇಸಿನಲ್ಲಿ ಹೊಂದಿಸಿ ಹೊಂದಿಸಿ ಇಡುತ್ತಿದ್ದ. ಅನ್ನಾಕಾಲಿಯು ಬಂದು ಕೇಳಿದಳು "ಅಣ್ಣಾ, ನೀವು

ನಾಳೆ ಪ್ರವಾಸಕ್ಕೆ ಹೊರಡುತ್ತೀರಲ್ಲವೆ ? ”

“ ಕಾಲೀ, ಹೋಗು, ಲಲಿತೆಯನ್ನು ಕರೆದುಕೊಂಡು ಬಾ. ಸಂಗಡ ಯಾವ ಯಾವ ವಸ್ತುಗಳನ್ನು ಒಯ್ಯಬೇಕೋ ಅವನ್ನೆಲ್ಲ ಈಗಲೇ ಕೊಟ್ಟುಹೋಗಲು ಹೇಳು ” ಎಂದ ಶೇಖರ.

ಲಲಿತೆ ಪ್ರತಿವರ್ಷ ಶೇಖರನ ತಾಯಿಯ ಸಂಗಡ ಪ್ರವಾಸಕ್ಕೆ ಹೋಗುತ್ತಿದ್ದಳು. ಈ ವರ್ಷವೂ ಅವಳು ಹೋಗುವಳೆಂದು ಶೇಖರ ಭಾವಿಸಿದ್ದ.

ಕಾಲಿಯು ತಲೆಯಲ್ಲಾಡಿಸುತ್ತ “ ಈ ಸಲ ಲಲಿತಕ್ಕ ಪ್ರವಾಸಕ್ಕೆ ಹೋಗುವದಿಲ್ಲ ” ಎಂದಳು.

“ ಏಕೆ ? ”

“ ಇದೇ ಮಾಘದಲ್ಲಿ ಅವರ ಮದಿವೆ. ಹೇಗೆ ಹೋಗುವರು ? ಮನೆಯಲ್ಲಿ ವರ ಹುಡುಕುತ್ತಿದ್ದಾರೆ. ”

ಇದನ್ನು ಕೇಳಿ ಶೇಖರನಿಗೆ ಅತ್ಯಾಶ್ಚರ್ಯವಾಯಿತು. ಶೂನ್ಯ ದೃಷ್ಟಿಯಿಂದ ಕಾಲಿಯನ್ನು ನೋಡತೊಡಗಿದ.

ಮನೆಯಲ್ಲಿ ಕೇಳಿದ್ದನ್ನೆಲ್ಲ ಕಾಲಿಯು ಉತ್ಸಾಹದಿಂದ ಹೇಳಿದಳು: “ ಮದಿವೆಗೆ ತಗಲುವ ವೆಚ್ಚವನ್ನೆಲ್ಲ ಗಿರೀಂದ್ರಬಾಬು ಕೊಡುತ್ತೇವೆಂದು ಹೇಳಿದ್ದಾರೆ; ಆದರೆ ವರ ಬಹಳ ಒಳ್ಳೆಯವನಾಗಿರಬೇಕು. ತಂದೆಯವರೂ ಈವೊತ್ತು ಕಚೇರಿಗೆ ಹೋಗುವದಿಲ್ಲ. ಅವರು ಮತ್ತು ಗಿರೀಂದ್ರಬಾಬು ಇಬ್ಬರೂ ಸೇರಿ ವರ ಹುಡುಕಲಿಕ್ಕೆ ಹೋಗುತ್ತಾರೆ. ”

ಶೇಖರ ಕೇಳುತ್ತಿದ್ದ. ಇತ್ತಿತ್ತ ಲಲಿತೆಯು ತನ್ನ ರೂಮಿಗೆ ಏಕೆ ಬರುತ್ತಿರುವದಿಲ್ಲವೆನ್ನುವದರ ಕಾರಣವೂ ಈವಾಗ ಸ್ವಲ್ಪಸ್ವಲ್ಪ ತಿಳಿಯಿತು.

ಪುನಃ ಕಾಲಿಯು ಮಾತಿಗೆ ಪ್ರಾರಂಭಿಸಿದಳು: “ ಗಿರೀಂದ್ರಬಾಬು ಬಹಳ ಒಳ್ಳೆಯವರು. ಅಕ್ಕನ ಮದಿವೆಗೋಸ್ಕರ ಮನೆಯನ್ನು ನವೀನ ರಾಯರ ಹತ್ತರ ಅಡವು ಇಟ್ಟಾಗಿದೆ. ೨-೩ ತಿಂಗಳಲ್ಲಿ ನಾವು ಬೀದಿ ಬೀದಿ ಅಲೆಯಬೇಕಾಗುವದೆಂದು ತಂದೆಯವರು ಎನ್ನುತ್ತಿದ್ದರು. ಇದನ್ನು

ಕೇಳಿ, ಮರುಗಿ ಗಿರೀಂದ್ರಬಾಬುಗಳು ನವೀನರಾಯರಿಗೆ ಎಲ್ಲ ರೂಪಾಯಿಗಳನ್ನು ಕೊಟ್ಟು ತಂದೆಯವರ ಸಾಲ ತೀರಿಸಿದರು. ಆದುದರಿಂದ ನಮಗೆ ಈವಾಗ ಯಾವ ತರದ ಚಿಂತೆ ಮತ್ತು ಅಂಜಿಕೆ ಇಲ್ಲವೆಂದು ಲಲಿತಕ್ಕ ಹೇಳುತ್ತಿದ್ದಳು. ಅಲ್ಲವೆ ಶೇಖರಣ್ಣಾ ?"

ಶೇಖರ ಉತ್ತರವನ್ನು ಕೊಡದೇ ಹಾಗೆಯೇ ಕಾಲಿಯನ್ನು ನೋಡುತ್ತ ನಿಂತ.

"ಏನು ಯೋಚಿಸುತ್ತಿದ್ದೀರಿ ಶೇಖರಣ್ಣಾ ?" ಕಾಲಿಯು ಕೇಳಿದಳು.

ಶೇಖರ ಬೆಚ್ಚಿಬಿದ್ದ. ಕೂಡಲೇ "ಏನೂ ಇಲ್ಲ. ಕಾಲೀ, ಲಲಿತೆಯನ್ನು ಬೇಗನೇ ಕರೆದುಕೊಂಡು ಬಾ, ಹೋಗು. ನಾನು ಕರೆಯುತ್ತೇನೆಂದು ಹೇಳು. ಹೋಗು, ಓಡುತ್ತ ಹೋಗು" ಎಂದ.

ಕಾಲಿಯು ಓಡುತ್ತ ಹೋದಳು.

ಶೇಖರನು ಏಕದೃಷ್ಟಿಯಿಂದ ಪೆಟ್ಟಿಗೆಯನ್ನು ನೋಡುತ್ತಿದ್ದ. ಯಾವ ವಸ್ತುವು ಬೇಕು, ಯಾವದು ಬೇಡ, ಯಾವದು ಅವಶ್ಯಕ, ಯಾವದು ಅನಾವಶ್ಯಕ ಎನ್ನುವದು ಅವನಿಗೆ ತಿಳಿಯದಾಯಿತು. ಅವನ ಕಂಣುಗಳಿಗೆ ಎಲ್ಲವೂ ಏಕಾಕಾರವಾಗಿ ಕಾಣತೊಡಗಿತು.

ಲಲಿತೆಯು ಬಂದು ರೂಮಿನ ಹೊರಗೆ ನಿಂತು ಕಿಡಿಕಿಯಲ್ಲಿ ಇಣಿಕಿ ನೋಡಿದಳು. ಶೇಖರನು ಒಂದೇ ಸವನೆ ಭೂಮಿದೇವಿಯನ್ನು ನೋಡುತ್ತಿದ್ದ. ಈ ಮೊದಲು ಶೇಖರನ ಮುಖದ ಮೇಲೆ ಈ ತರದ ಭಾವನೆಯನ್ನು ಅವಳು ಎಂದೂ ನೋಡಿರಲಿಲ್ಲ. ಅವಳಿಗೆ ಆಶ್ಚರ್ಯವಾಯಿತು. ಅಂಜಿಕೆಯು ಬಂತು. ಮೆಲ್ಲಮೆಲ್ಲನೆ ಅವನ ಹತ್ತಿರ ಬಂದು ನಿಂತಳು. ವ್ಯಸ್ತ ಭಾವದಿಂದ "ಬಾ" ಎಂದ ಶೇಖರ.

ಮೆಲ್ಲನೆ ಕೇಳಿದಳು "ನನ್ನನ್ನು ಕರೆದಿದ್ದಿರೇನು ?"

"ಹೌದು" ಎಂದು ಸ್ವಲ್ಪ ಸಮಯ ಮಾತನಾಡದೆ ಸುಮ್ಮನೆ ನಿಂತ. ಪುನಃ "ನಾಳೆ ಬೆಳಗಿನ ರೈಲಿನಿಂದ ಅಮ್ಮನನ್ನು ಕರೆದುಕೊಂಡು ಪ್ರಯಾಗಕ್ಕೆ ಹೋಗುವೆ. ಈ ಸಲ ಹಿಂತಿರುಗುವದಕ್ಕೆ ತಡವಾಗಬಹುದು. ತೆಗೆದುಕೋ ಈ ಬೀಗದ ಕೈ. ನಿನಗೆ ಬೇಕಾಗುವ ಸಾಮಾನು

ಗಳೆಲ್ಲ ಈ ಪೆಟ್ಟಿಗೆಯಲ್ಲಿವೆ; ರೂಪಾಯಿಗಳು ಈ ಖಜಾನೆಯಲ್ಲಿವೆ " ಎಂದ.

ಪ್ರತಿವರ್ಷ ಲಲಿತೆಯೂ ಇವರ ಸಂಗಡ ಹೋಗುತ್ತಿದ್ದುದರಿಂದ ಹೋದ ವರ್ಷ ಈ ಯಾತ್ರೆಯ ಸಲುವಾಗಿ ಯಾವ ಯಾವ ಸಾಮಾನುಗಳು ಬೇಕೋ ಅವೆಲ್ಲವನ್ನೂ ಉತ್ಸಾಹದಿಂದ ಕಟ್ಟಿ ಸಿದ್ಧಮಾಡಿ ಇಟ್ಟಿದ್ದಳು. ಆದರೆ ಈ ಸಲ ಇವೆಲ್ಲವನ್ನೂ ಶೇಖರನು ಮಾಡಬೇಕಾಯಿತು. ಆ ತೆರೆದ ಪೆಟ್ಟಿಗೆಯನ್ನು ನೋಡುತ್ತಲೇ ಇವೆಲ್ಲವೂ ಗೊತ್ತಾಯಿತು ಲಲಿತೆಗೆ.

ಮುಖ ತಿರುಗಿಸಿ ಒಂದು ಸಲ ಕೆಮ್ಮಿದ ಶೇಖರ. ಬಳಿಕ ಕಂಠವನ್ನು ಸ್ವಲ್ಪ ಸರಳಮಾಡಿಕೊಂಡು " ನೋಡು, ಎಚ್ಚರದಿಂದ ಇರು. ನಿನಗೆ ಏನಾದರೂ ಬೇಕಾದರೆ ತಂದೆಯವರನ್ನು ಕೇಳಿ ನನ್ನ ವಿಳಾಸ ತಿಳಿದುಕೋ. ಪತ್ರ ಬರೆ. ಎಲ್ಲವನ್ನೂ ಕಳುಹಿಸಿಕೊಡುತ್ತೇನೆ " ಎಂದ.

ಇಬ್ಬರೂ ಮೌನವಾಗಿದ್ದರು.

ತಾನು ಪ್ರವಾಸಕ್ಕೆ ಹೋಗದಿರುವ ಕಾರಣವು ಶೇಖರಣ್ಣಗೆ ಗೊತ್ತಾಗಿದೆಯೆನ್ನುವದು ಲಲಿತೆಗೆ ತಿಳಿಯಿತು. ಅವಳ ಮುಖದ ಮೇಲೆ ನಾಚಿಕೆಯು ನಲಿದಾಡಲಾರಂಭಿಸಿತು.

" ಒಳ್ಳೇದು, ಈವಾಗ ಹೋಗು. ಸಮಯವಾಗುತ್ತ ಬಂತು. ಸಾಮಾನುಗಳನ್ನೆಲ್ಲಾ ಇಟ್ಟು, ಸ್ವಲ್ಪ ಕಚೇರಿಗೆ ಹೋಗಿಬರಬೇಕು " ಎಂದ ಶೇಖರ.

ತೆರೆದ ಪೆಟ್ಟಿಗೆಯ ಮುಂದೆ ಹೋಗಿ ಕುಳಿತಳು ಲಲಿತೆ. " ನೀವು ಹೋಗಿ ಸ್ನಾನಮಾಡಿ. ನಾನೆಲ್ಲ ಸಾಮಾನುಗಳನ್ನು ಈ ಪೆಟ್ಟಿಗೆಯಲ್ಲಿ ಇರಿಸುತ್ತೇನೆ " ಎಂದಳು ಮೆಲ್ಲನೆ.

" ಶುಭಕಾರ್ಯವನ್ನು ಕೂಡಲೇ ಮಾಡುವದಕ್ಕೆ ಪ್ರಾರಂಭಿಸಿಬಿಡಬೇಕು. ಹೇಳಿ ಕೇಳಿ, ಅಪ್ಪಣೆ ಪಡೆದುಕೊಂಡು ಆ ಮೇಲೆ ಕೆಲಸಕ್ಕೆ ಪ್ರಾರಂಭಿಸಬಾರದು. ಪ್ರಾರಂಭಮಾಡಿ ಅಪ್ಪಣೆ ಕೇಳಬೇಕು " ಎಂದು ಬೀಗದ ಕೈಗಳನ್ನು ಕೊಟ್ಟು ರೂಮಿನ ಹೊರಗೆ ಹೋಗಿ ನಿಂತು " ನನಗೆ ಯಾವ ಯಾವ ಸಾಮಾನುಗಳು ಬೇಕು, ಎನ್ನುವದನ್ನು ಮರೆತಿಲ್ಲವಷ್ಟೇ?"

ಎಂದು ಕೇಳಿದ.

ಲಲಿತೆಯು ಪೆಟ್ಟಿಗೆಯೊಳಗಿನ ಸಾಮಾನುಗಳನ್ನು ನೋಡಲಾರಂಭಿಸಿದಳು. ಶೇಖರನ ಮಾತಿಗೆ ಉತ್ತರವನ್ನು ಕೊಡಲಿಲ್ಲ.

ಕೆಳಗೆ ಹೋಗಿ ತಾಯಿಯನ್ನು ವಿಚಾರಿಸಿದ. ಕಾಲಿಯು ಹೇಳಿದ ಮಾತುಗಳೆಲ್ಲವೂ ನಿಜವಿದ್ದವು. ಗುರುಚರಣರು ಸಾಲವನ್ನು ತೀರಿಸಿದ್ದು ನಿಜ; ಲಲಿತೆಗೆ ವರನನ್ನು ಹುಡುಕುತ್ತಿರುವದೂ ನಿಜ. ಎಲ್ಲವನ್ನು ಅರಿತುಕೊಂಡು ಶೇಖರ ಸ್ನಾನಕ್ಕೆ ಹೋದ.

ಸ್ನಾನಭೋಜನಾದಿಗಳನ್ನು ಮುಗಿಸಿಕೊಂಡು ಮೇಲಕ್ಕೆ ಬಂದ. ಅಲ್ಲಿಯ ಪರಿಸ್ಥಿತಿಯನ್ನು ಕಂಡು ದಿಙ್ಮೂಢನಾದ. ಎರಡು ಗಂಟೆಗಳ ಕಾಲ ಕಳೆದು ಹೋದರೂ ಲಲಿತೆಯು ಏನೂ ಮಾಡಿರಲಿಲ್ಲ. ಪೆಟ್ಟಿಗೆಯ ಒಂದು ತುದಿಯ ಮೇಲೆ ತಲೆಯನ್ನಿಟ್ಟುಕೊಂಡು ಕುಳಿತಿದ್ದಳು. ಶೇಖರನು ಬರುತ್ತಲೇ ಸರಿಯಾಗಿ ಎದ್ದು ಕುಳಿತು, ಕತ್ತು ಬಾಗಿಸಿದಳು. ಅತ್ತು ಅತ್ತು ಅವಳ ಕಣ್ಣುಗಳು ಕೆಂಪು ದಾಸಾಳ ಪುಷ್ಪಗಳಂತೆ ಕೆಂಪಾಗಿದ್ದವು.

ಅವಳನ್ನು ನೋಡಿಯೂ ನೋಡದಂತೆ ನಟಿಸಿ, ಡ್ರೆಸ್ಸು ಧರಿಸುತ್ತ "ಈವಾಗ ನೀನು ಸಾಮಾನುಗಳನ್ನು ಇಡಲಾರೆ. ಮಧ್ಯಾಹ್ನದಲ್ಲಿ ಯಾವಾಗಾದರೂ ಬಿಡುವು ದೊರೆತಾಗ ಬಂದು ಇಡು" ಎಂದು ಪೂರ್ಣ ಡ್ರೆಸ್ಸು ಹಾಕಿಕೊಂಡು ಕಚೇರಿಗೆ ಹೋಗಿಬಿಟ್ಟ ಶೇಖರ. ಲಲಿತೆಯ ಕಣ್ಣುಗಳು ಕೆಂಪಾದುದರ ಕಾರಣವು ಅವನಿಗೆ ಗೊತ್ತಾಯಿತು. ಎಲ್ಲ ಸಮಸ್ಯೆಗಳ ವಿಷಯವಾಗಿ ಸಂಪೂರ್ಣ ವಿಚಾರ ಮಾಡದೆಯೆ ಅವಳಿಗೆ ಮಾತನಾಡುವ ಸಾಹಸವನ್ನು ಅವನು ಮಾಡಲಿಲ್ಲ.

ಆ ದಿನ ಮಧ್ಯಾಹ್ನ ತನ್ನ ಮಾವ ಮೊದಲಾದವರಿಗೆ ಟೀ ಕೊಡುವದಕ್ಕೆ ಪಡಸಾಲೆಗೆ ಬಂದಾಗ ಲಲಿತೆಗೆ ಸಂಕೋಚವಾಯಿತು. ಈವೊತ್ತು ಅಲ್ಲಿಗೆ ಶೇಖರ ಬಂದಿದ್ದ. ಯಾತ್ರೆಗೆ ಹೋಗುವ ಪೂರ್ವದಲ್ಲಿ ಗುರುಚರಣರನ್ನು ಕಂಡು ಹೋಗಬೇಕೆಂದು ಬಂದಿದ್ದ.

ಲಲಿತೆಯು ತಲೆಬಾಗಿಸಿಕೊಂಡು ಬಂದು ಒಂದು ಲೋಟ ಟೀ

ತನ್ನ ಮಾವನ ಎದುರಿಗೆ, ಒಂದು ಲೋಟ ಟೀ ತನ್ನ ಮಾವನ ಗೆಳೆಯ ಗಿರೀಂದ್ರನ ಎದುರಿಗೆ ಇಟ್ಟಳು. ಇದನ್ನು ನೋಡಿ "ಶೇಖರನಾಥರಿಗೆ ಟೀ ಕೊಡುವದಿಲ್ಲೇನೆ ಲಲಿತಾ?" ಎಂದ ಗಿರೀಂದ್ರ.

"ಅವರು ಟೀ ಕುಡಿಯುವದಿಲ್ಲ" ಎಂದಳು ಲಲಿತಾ. ಗಿರೀಂದ್ರನು ಏನೂ ಮಾತನಾಡಲಿಲ್ಲ. ಹಿಂದೆ ಒಂದು ದಿನ ತನಗೆ ಶೇಖರಣ್ಣನು ಟೀ ಕುಡಿಯುವದಿಲ್ಲವೆಂದೂ, ಎರಡನೆಯವರು ಕುಡಿವರೆ ಅದೂ ಅವರ ಮನಸ್ಸಿಗೆ ಬರುವದಿಲ್ಲವೆಂದೂ ಲಲಿತೆಯು ಹೇಳಿದ್ದರ ನೆನಪೂ ಬಂತು.

ಟೀ ಲೋಟವನ್ನು ಕೈಯಲ್ಲಿ ತೆಗೆದುಕೊಂಡು ಲಲಿತೆಯ ಸಲುವಾಗಿ ನೋಡಿ ಬಂದ ವರಗಳ ವಿಷಯವಾಗಿ ಗುರುಚರಣರು ಮಾತನಾಡತೊಡಗಿದರು. "ಈವೊತ್ತು ನೋಡಿಬಂದ ಹುಡುಗ ಬುದ್ಧಿವಂತ; ಸಜ್ಜನ. ಬಿ. ಎ. ಯಲ್ಲಿ ಓದುತ್ತಿದ್ದಾನೆ. ಇಷ್ಟಿದ್ದರೂ ನಮ್ಮ ಗಿರೀಂದ್ರನ ಮನಸ್ಸಿಗೆ ಅವನು ಸರಿತೋರಲಿಲ್ಲ. ನೋಡಲು ಅಷ್ಟು ಸುಂದರ ಮಾತ್ರ ಇಲ್ಲ. ರೂಪ ತೆಗೆದುಕೊಂಡು ಮಾಡುವದೇನು? ಗಂಡುಹುಡುಗರ ರೂಪದ ಉಪಯೋಗ ಮದಿವೆಯ ಕಾಲದಲ್ಲಿ ಮಾತ್ರ. ಆ ಮೇಲೆ ಅದು ನಿರುಪಯೋಗ. ಗುಣಗಳು ಒಳ್ಳೆಯವು ಇದ್ದರಾಯಿತು."

ಗುರುಚರಣರಿಗೆ ವರ ಹುಡುಕಿ ಹುಡುಕಿ ಸಾಕುಸಾಕಾಗಿತ್ತು. ಅಂತೆಯೇ ಹುಡುಗ ಹೇಗಿದ್ದರೂ ಸರಿಯೆ, ಹುಡುಗಿಯ ಮದಿವೆಯೊಂದು ಆದರೆ ಸಾಕು ಎನ್ನುತ್ತಿದ್ದರು.

ಈವೊತ್ತೇ ಶೇಖರನಿಗೆ ಗಿರೀಂದ್ರನ ಸ್ವಲ್ಪ ಪರಿಚಯವಾಯಿತು. ಅವನು ಗಿರೀಂದ್ರನ ಕಡೆ ನೋಡುತ್ತ "ಗಿರೀಂದ್ರಬಾಬುಗಳ ಮನಸ್ಸಿಗೇಕೆ ಬರಲಿಲ್ಲ? ಹುಡುಗ ಬಿ. ಎ. ಯಲ್ಲಿ ಓದುತ್ತಿದ್ದಾನೆ. ವಯಸ್ಸೂ ಕಡಿಮೆ; ಎಂದ ಮೇಲೆ ಸುಪಾತ್ರ!" ಎಂದ.

ಶೇಖರನು ಈ ಪ್ರಶ್ನೆಯನ್ನು ಕೇಳಿದರೂ ಹುಡುಗ ಗಿರೀಂದ್ರನ ಮನಸ್ಸಿಗೇಕೆ ಬರುವದಿಲ್ಲವೆನ್ನುವದರ ಕಾರಣವನ್ನು ಅರಿತುಕೊಂಡಿದ್ದ. ಈ ಹುಡುಗ ಏಕೆ ಮನಸ್ಸಿಗೆ ಬರಲಿಲ್ಲ, ಮುಂದೆ ಕೂಡ ಯಾವ ಹುಡುಗನೂ ಮನಸ್ಸಿಗೆ ಬರಲಿಕ್ಕಿಲ್ಲ ಎನ್ನುವದನ್ನೂ ಅವನು ತಿಳಿದು

ಕೊಂಡಿದ್ದ. ಗಿರೀಂದ್ರನು ಕೂಡಲೇ ಶೇಖರನ ಪ್ರಶ್ನೆಯ ಉತ್ತರವನ್ನೀಯಲಿಲ್ಲ. ಅವನ ಮುಖ ಲಜ್ಜೆಯಿಂದ ಕೆಂಪೇರಿತು. ಇದನ್ನು ಶೇಖರನು ನೋಡಿದ. "ಮಾವ, ನಾಳೆ ನಾನು ತಾಯಿಯನ್ನು ಕರೆದುಕೊಂಡು ಪ್ರಯಾಗಕ್ಕೆ ಹೋಗುತ್ತೇನೆ. ಶುಭಕಾರ್ಯದ ಸಮಾಚಾರ ನನ್ನ ತಕ್ಕ ಸಮಯಕ್ಕೆ ಕೊಡಲು ಮರೆಯಬೇಡಿ" ಎನ್ನುತ್ತ ಹೊರಡಲು ಸಿದ್ಧನಾಗಿ ನಿಂತ.

"ಹೀಗೇಕಾದರೂ ಆಗಬಲ್ಲದೆ ಮಗೂ! ನೀವೇ ನನಗೆ ಬಂಧುಗಳು, ಬಳಗದವರು. ಅಲ್ಲದೆ ಲಲಿತೆಯ ಸಾಕಿದ ತಾಯಿ ಭುವನೇಶ್ವರೀ ದೇವಿಯವರ ಹೊರತು ಕಾರ್ಯವು ಮುಂದುವರಿಯುವಂತೆಯೇ ಇಲ್ಲ. ಅಲ್ಲವೆ ಲಲಿತಾ?" ಎಂದು ನಗುತ್ತ ಗುರುಚರಣರು ಲಲಿತೆಯ ಕಡೆಗೆ ನೋಡಿದರು.

ಲಲಿತೆಯು ಅಲ್ಲಿರಲಿಲ್ಲ. ಅವರು ಕೇಳಿದರು: "ಲಲಿತೆಯು ಇಲ್ಲಿಂದ ಯಾವಾಗ ಎದ್ದು ಹೋದಳು?"

"ಈ ಮಾತಿನ ಚರ್ಚೆಗೆ ಪ್ರಾರಂಭವಾಗುತ್ತಲೇ ಎದ್ದು ಓಡಿ ಹೋದಳು" ಎಂದ ಶೇಖರ.

ಗುರುಚರಣರು ಗಂಭೀರತೆಯಿಂದ "ಹೋಗದೇನು ಮಾಡುವಳು ಓಡಿ? ಈವಾಗ ಎಲ್ಲವೂ ತಿಳಿಯುವ ವಯಸ್ಸು" ಎಂದರು.

ಒಂದು ನಿಟ್ಟುಸಿರು ಬಿಟ್ಟು ಪುನಃ "ಈ ನನ್ನ ಹುಡುಗಿ ಸಾಕ್ಷಾತ್ ಸರಸ್ವತಿ-ಲಕ್ಷ್ಮಿಯ ಅವತಾರ! ಇಂತಹ ಹುಡುಗಿ ಸಿಕ್ಕುವದಕ್ಕೆ ಸೌಭಾಗ್ಯ ಬೇಕು ಶೇಖರನಾಥ" ಎಂದರು.

ಈ ನುಡಿಗಳನ್ನು ನುಡಿಯುವಾಗ ಗುರುಚರಣರ ಮುಖದ ಮೇಲೆ ಒಂದು ದಿವ್ಯವಾದ ಮಧುರ-ಸ್ನೇಹದ ಜ್ಯೋತಿಯು ಸರಸವಾಡತೊಡಗಿತು. ಇದನ್ನು ಕಂಡು ಶೇಖರನೂ ಗಿರೀಂದ್ರನೂ ತಮ್ಮ ಅಂತಃಕರಣಗಳಲ್ಲಿ ಅವರಿಗೆ ಕೈಮುಗಿದರು.

೭

ಲಲಿತೆಯು ಗುರುಚರಣರಿಗೆ ಮತ್ತು ಗಿರೀಂದ್ರನಿಗೆ ಟೀ ಕೊಟ್ಟು

ಶೇಖರನ ರೂಮಿಗೆ ಬಂದಳು. ವಿದ್ಯುದ್ದೀಪವು ಉರಿಯುತ್ತಿತ್ತು. ಶೇಖರನ ಪೆಟ್ಟಿಗೆಯಲ್ಲಿ ಉಣ್ಣೆಯ ಬಟ್ಟೆಗಳನ್ನು ಫೋಲ್ಡ್ ಮಾಡಿ ಇಡುತ್ತಿದ್ದಳು. ಇಷ್ಟರಲ್ಲಿ ಶೇಖರನು ಅಲ್ಲಿಗೆ ಬಂದ. ಅವನನ್ನು ನೋಡಿದ ಕೂಡಲೇ ಅವಳಿಗೆ ಅತ್ಯಂತ ವಿಸ್ಮಯವಾಯಿತು, ಭಯವಾದಂತಾಯಿತು. ಬಾಯಿಯಿಂದ ಶಬ್ದಗಳೇ ಹೊರಬೀಳಲಿಲ್ಲ. ಕಾರಣವೇನು? ಶೇಖರನ ಮುಖವು ಅತ್ಯಂತ ಮ್ಲಾನವಾಗಿತ್ತು. ಮೊಕದ್ದಮೆಯಲ್ಲಿ ಸೋತು ಸರ್ವಸ್ವವನ್ನು ಕಳೆದುಕೊಂಡವರಂತೆ ಅವನ ಮುಖವು ಕಾಂತಿಹೀನವಾಗಿತ್ತು. ಗುರುಚರಣರ ಮನೆಯಿಂದ ತನ್ನ ರೂಮಿಗೆ ಬರುವಷ್ಟರಲ್ಲಿ ಅವನ ಮುಖದಲ್ಲಿ ಇಷ್ಟು ಪರಿವರ್ತನೆಯಾಗಿತ್ತು. ಲಲಿತೆಯು ಅವನಿಗೆ ಪರಕೀಯಳಂತೆ ಕಾಣತೊಡಗಿದಳು. ಅವನ ಕಂಠವು ಒಣಗಿಹೋಗಿತ್ತು. ಭಾರವಾದ ದನಿಯಿಂದ "ಏನು ಮಾಡುತ್ತಿದ್ದೀ ಲಲಿತಾ?" ಎಂದ.

ಲಲಿತೆಯು ಈ ಪ್ರಶ್ನೆಗೆ ಉತ್ತರವೀಯಲಿಲ್ಲ. ಮೆಲ್ಲನೆ ಎದ್ದು ಅವನ ಹತ್ತಿರ ಬಂದಳು. ಅವನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಗದ್ಗದಸ್ವರದಿಂದ "ಏನಾಯಿತು ಶೇಖರಣ್ಣಾ?" ಎಂದು ಕೇಳಿದಳು.

"ಏನಿಲ್ಲ, ಏನಿಲ್ಲ" ಎಂದು ನಗಲು ಪ್ರಯತ್ನಿಸಿದ. ನಗು ಬರಲಿಲ್ಲ. ಘೋರ ಪ್ರಯತ್ನಮಾಡಿ ಸ್ವಲ್ಪ ನಕ್ಕ. ಲಲಿತೆಯ ಕರಸ್ಪರ್ಶದಿಂದ ಅವನ ಮುಖದಲ್ಲಿ ಜೀವನದ ಜ್ಯೋತಿಯು ಮೆಲ್ಲಮೆಲ್ಲನೆ ಮೂಡತೊಡಗಿತು. ಬಳಿಯಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತು ಪುನಃ ಅದೇ ಪ್ರಶ್ನೆಯನ್ನು ಕೇಳಿದ: "ಏನು ಮಾಡುತ್ತಿದ್ದೀ ಲಲಿತಾ?"

"ದಪ್ಪಗಿನ ಓವರ್‌ಕೋಟು ಇಡಲು ಮರೆತಿದ್ದೆ; ಇಡಲು ಬಂದಿದ್ದೆ."

ಶೇಖರ ಆಲಿಸಲಾರಂಭಿಸಿದ. ಅವಳಿಗೂ ಸ್ವಲ್ಪ ಧೈರ್ಯ ಬಂತು. ಹೇಳಲಾರಂಭಿಸಿದಳು. "ಆಚೆ ವರ್ಷ ರೈಲಿನಲ್ಲಿ ನಿಮಗೆ ಚಳಿಯಿಂದ ಬಹಳ ಕಷ್ಟವಾಯಿತು, ಅಲ್ಲವೆ! ಎಷ್ಟೋ ಉಣ್ಣೆಯ ಕೋಟುಗಳಿದ್ದವು; ಆದರೆ ದಪ್ಪವಾದ ದೊಡ್ಡದು ಒಂದೂ ಇರಲಿಲ್ಲ. ಆದುದರಿಂದ ಯಾತ್ರೆ

ಯಿಂದ ಮರಳಿದೊಡನೆಯೇ ದರ್ಜಿಗೆ ನಿಮ್ಮ ಅಳತೆ ಕೊಟ್ಟು ಈ ದೊಡ್ಡ ಫ್ರಲಸ್ ಓವರ್‌ಕೋಟು ಹೊಲಿಸಿ ಇಟ್ಟಿದ್ದೆ."

ಲಲಿತೆಯು ಆ ಕೋಟು ತಂದು ಶೇಖರನ ಕೈಯಲ್ಲಿ ಕೊಟ್ಟಳು. ಅವನು ಅದನ್ನು ಸರಿಯಾಗಿ ನೋಡಿ "ಇದರ ವಿಷಯವಾಗಿ ನೀನು ನನಗೆ ಏನೂ ಹೇಳಲಿಲ್ಲ" ಎಂದ.

ಲಲಿತೆಯು ನಕ್ಕು "ನೀವು ರಾಯರು! ಮೊದಲೇ ಹೇಳಿದ್ದರೆ ಇಂತಹ ಕೋಟು ಹೊಲಿಸುವದಕ್ಕೆ ಅಪ್ಪಣೆ ಕೊಡುತ್ತಿದ್ದಿರೇನು? ಅಂತೆಯೆ ನಿಮ್ಮನ್ನು ಕೇಳಲಿಲ್ಲ. ಹೊಲಿಸಿ ಇಟ್ಟೆ" ಎಂದಳು. ಆ ಕೋಟನ್ನು ಯಥಾಸ್ಥಾನದಲ್ಲಿಟ್ಟು ಪುನಃ "ಅದನ್ನು ಮೇಲೆಯೇ ಇಟ್ಟಿದ್ದೇನೆ. ಪೆಟ್ಟಿಗೆ ತೆರೆಯುತ್ತಲೇ ಸಿಕ್ಕುವದು. ಚಳಿಯಾಗಲಾರಂಭಿಸಿದೊಡನೆಯೇ ಅದನ್ನು ತೊಟ್ಟುಕೊಳ್ಳಿ. ಮರೆಯಬೇಡಿ, ಎಂದು ದೈನ್ಯದಿಂದ ಬೇಡಿಕೊಳ್ಳುತ್ತೇನೆ" ಎಂದಳು.

"ಒಳ್ಳೇದು" ಎಂದು ಶೇಖರ ಲಲಿತೆಯನ್ನು ಏಕದೃಷ್ಟಿಯಿಂದ ಒಂದೇ ಸಮನೆ ನೋಡಲಾರಂಭಿಸಿದ. ಬಳಿಕ ಒಮ್ಮೆಲೆ "ಆಗದು, ಇದಾಗದು—ಯಾವ ರೀತಿಯಿಂದಲೂ ಆಗದು!" ಎಂದ.

"ಏನು ಶೇಖರಣ್ಣಾ, ತೊಟ್ಟುಕೊಳ್ಳುವದು ಆಗದೆ?"

"ಅಲ್ಲ, ಅಲ್ಲ. ಆ ಮಾತೇ ಬೇರೆ.—ಒಳ್ಳೇದು. ಲಲಿತಾ, ಅಮ್ಮನ ಸಾಮಾನುಗಳನ್ನು ಕಟ್ಟಿ ಇಟ್ಟಿಯಾ?"

"ಎಲ್ಲ ಸಾಮಾನುಗಳನ್ನು ನಾನೇ ಮಧ್ಯಾನ್ಹದಲ್ಲಿ ಕಟ್ಟಿ ಸಿದ್ಧಮಾಡಿ ಇಟ್ಟಿದ್ದೇನೆ" ಎಂದು ಲಲಿತೆಯು ಮತ್ತೊಂದು ಸಲ ಎಲ್ಲ ಸಾಮಾನುಗಳನ್ನೂ ಪರಿಶೀಲಿಸಿ ನೋಡಿ ಪೆಟ್ಟಿಗೆಗೆ ಬೀಗಹಾಕಲಾರಂಭಿಸಿದಳು.

ಸ್ವಲ್ಪ ಸಮಯದ ನಂತರ ಲಲಿತೆಯನ್ನು ನೋಡುತ್ತ "ಒಳ್ಳೇದು, ಲಲಿತಾ, ಮುಂದಿನ ವರ್ಷ ನನ್ನ ಸ್ಥಿತಿ ಏನಾಗುವದು? ಹೇಳಬಲ್ಲೆಯಾ?" ಎಂದ.

ಲಲಿತೆಯೂ ಅವನನ್ನು ನೋಡುತ್ತ "ಏಕೆ?" ಎಂದು ಕೇಳಿದಳು.

"ಏಕೆನ್ನುವದನ್ನು ನಾನೇ ಅನುಭವಿಸುತ್ತಿದ್ದೇನೆ ಲಲಿತಾ" ಎಂದು, ಪುನಃ ಅದನ್ನು ಬಚ್ಚಿಡುವದಕ್ಕಾಗಿ ಗಟ್ಟಿಯಾಗಿ ನಕ್ಕ. ಮಾತನ್ನು ತಿರುಗಿಸಿ "ನೀನೇನೊ ಪರರ ಮನೆಗೆ ಇನ್ನು ಸ್ವಲ್ಪ ದಿನಗಳಲ್ಲಿ ಹೋಗುವವಳು. ಹೋಗುವದಕ್ಕೆ ಮುಂಚಿತವಾಗಿ ಯಾವ ಯಾವ ಸಾಮಾನುಗಳನ್ನು ಎಲ್ಲೆಲ್ಲಿ ಇಟ್ಟಿರುವೆಯೆಂಬುದನ್ನು ತೋರಿಸಿ ಹೋಗಲು ಮರೆಯಬೇಡ. ಇಲ್ಲದಿದ್ದರೆ ತಕ್ಕ ಸಮಯಕ್ಕೆ ತಕ್ಕ ಸಾಮಾನು ಸಿಕ್ಕದೆ ತೊಂದರೆಯಾಗುವದು" ಎಂದ.

ಲಲಿತೆಯು ಕೋಪದಿಂದ "ಹೋಗಿ—" ಎಂದಳು.

ಈವಾಗ ಶೇಖರನಿಗೆ ನಗು ಬಂತು. "ಹೋಗಿ--ಎನ್ನುವದರ ಅರ್ಥ ನನಗೆ ಗೊತ್ತು. ತಮಾಷೆಯಲ್ಲ ಲಲಿತಾ, ನಿಜವಾಗಿಯೂ ನನ್ನ ಭವಿಷ್ಯದ ಬಾಳ್ವೆ ಎಂತಾಗುವದು? ನಾನೇನೊ ಸೋಮಾರಿ ಮನುಷ್ಯ. ನನ್ನ ಇಚ್ಛೆಯನ್ನು ಪೂರ್ತಿಮಾಡಿಕೊಳ್ಳುವ ಶಕ್ತಿ ನನ್ನಲ್ಲಿ ಇಲ್ಲ. ಆಳು ಗಳಿಂದ ಕೆಲಸ ಮಾಡಿಸಿಕೊಳ್ಳುವ ಹಾಗಿಲ್ಲ. ಅವರು ಮಾಡಿದರೂ ಕಾಟ ಕಳೆಯುವದಕ್ಕೆ ಮಾಡುವರು. ಏನು ಮಾಡಬೇಕೆನ್ನುವದು ತಿಳಿಯ ದಾಗಿದೆ. ಇನ್ನು ನಿನ್ನ ಮಾಸನಂತೆ ಒಂದೇ ಒಂದು ಪಂಚೆ ಮತ್ತು ಒಂದು ಷರ್ಟಿನ ಮೇಲೆ ಕಾಲವನ್ನು ಕಳೆಯಬೇಕಾಗುವದು. ಒಳ್ಳೇದು. ಹಣೆಯಲ್ಲಿ ಬರೆದಂತೆ ಆಗುವದು" ಎಂದ.

ಬೀಗದ ಕೈಗೊಂಚಲನ್ನು ಚೆಲ್ಲಿದವಳೇ ಅಲ್ಲಿಂದ ಓಡಿಹೋದಳು ಲಲಿತಾ. "ನಾಳೆ ಬೆಳಿಗ್ಗೆ ಒಂದು ಸಲ ಬಂದುಹೋಗು" ಎಂದು ಶೇಖರ ಕೂಗಿಹೇಳಿದ.

ಲಲಿತೆಗೆ ಶೇಖರನ ಮಾತುಗಳು ಕೇಳಿಸಿದರೂ ಕೇಳದವಳಂತೆ ನಟಿಸಿ ಅವಳು ಮೆಟ್ಟಿಲುಗಳನ್ನು ದಡದಡನೆ ಇಳಿದು ಕೆಳಗೆ ಬಂದಳು. ಅಲ್ಲಿಯೂ ಬಹಳ ಹೊತ್ತು ನಿಲ್ಲಲಿಲ್ಲ; ತನ್ನ ಮನೆಗೆ ಹೋದಳು. ಕೆಳಗೆ ಕುಳಿತುಕೊಳ್ಳುವದಾಗಲಿಲ್ಲ. ಮಾಳಿಗೆಯ ಮೇಲೆ ಹೋದಳು. ಕಮನೀಯ ಕೌಮುದಿಯಲ್ಲಿ ಕುಳಿತು ಅನ್ನಾಕಾಲಿಯು ಚೆಂಡುಹೂವಿನ ಮಾಲೆ ಯನ್ನು ಮಾಡುತ್ತಿದ್ದಳು. ಲಲಿತೆಯು ಅವಳ ಹತ್ತಿರ ಹೋಗಿ "ಮಂಜು

ಬೀಳುತ್ತಿದೆ. ಇಲ್ಲಿ ಕುಳಿತು ಏನು ಮಾಡುತ್ತೀ ಕಾಲೀ?" ಎಂದಳು.

"ಮಾಲೆ ಮಾಡುತ್ತಿದ್ದೇನೆ. ಈಹೊತ್ತು ರಾತ್ರಿ ನನ್ನ ಮಗಳ ಮದಿವೆ. ಗೊತ್ತಿಲ್ಲವೆ ನಿಮಗೆ?"

"ನನಗೆ ನೀನು ಹೇಳಲೇ ಇಲ್ಲ, ಅಲ್ಲೀ!"

"ಅಕ್ಕ, ಸಾಯಂಕಾಲದ ವರೆಗೂ ನಿಶ್ಚಯವೇ ಆಗಿರಲಿಲ್ಲ. ಸ್ವಲ್ಪ ಹೊತ್ತಿನ ಮುಂಚೆ, ತಂದೆಯವರು ಈಹೊತ್ತನ್ನು ಬಿಟ್ಟರೆ ಈ ತಿಂಗಳಲ್ಲಿ ಮುಹೂರ್ತವೇ ಇಲ್ಲವೆಂದು ಪಂಚಾಂಗ ನೋಡಿ ಹೇಳಿದರು. ಹುಡುಗಿ ದೊಡ್ಡವಳಾಗಿದ್ದಾಳೆ. ತಡಮಾಡಿ ಮದಿವೆ ಮಾಡಿದರೆ ಮಂದಿ ನಗುವರು. ಆದ ಹಾಗೆ ಈಹೊತ್ತಿನ ಮುಹೂರ್ತದಲ್ಲಿಯೇ ಅಕ್ಷತೆಗಳನ್ನು ಹಾಕಿಬಿಡಬೇಕು. ಒಳ್ಳೇದು, ಅಕ್ಕ, ಎರಡು ರೂಪಾಯಿಗಳನ್ನು ಕೊಡಿ. ಮೆರವಣಿಗೆಯವರಿಗೋಸ್ಕರ ಮಿಠಾಯಿ ತರಿಸಬೇಕಾಗಿದೆ."

ಲಲಿತೆಯು ನಕ್ಕು, "ರೂಪಾಯಿ ಬೇಕಾದಾಗ ಅಕ್ಕನ ನೆನಪು. ಹೋಗು, ನನ್ನ ಹಾಸಿಗೆಯ ಮೇಲೆ ದಿಂಬಿನ ಕೆಳಗೆ ಇಟ್ಟಿದ್ದೇನೆ. ತೆಗೆದುಕೊಂಡು ಬಾ, ಹೋಗು. ಒಳ್ಳೇದು, ಕಾಲೀ, ಚೆಂಡುಹೂಗಳಿಂದ ಮದಿವೆಯಾಗುತ್ತದೆಯೇನೆ?" ಎಂದಳು.

ಕಾಲಿಯು ಹಿರಿಯ ಹೆಂಗಸರಂತೆ ಹಾವಭಾವ ಮಾಡುತ್ತ "ಎಲ್ಲಾ ಆಗುತ್ತೆ. ಹೂಗಳು ದೊರೆಯದೇ ಹೋದರೆ ಇವುಗಳಿಂದಲೇ ಕೆಲಸ ಸಾಗಿಸುತ್ತಾರೆ. ಈ ಹೂಗಳಿಂದಲೇ ನನ್ನ ಎಷ್ಟೋ ಮಕ್ಕಳ ಮದಿವೆ ಮಾಡಿದ್ದೇನೆ. ಅಕ್ಕ, ನನಗೆಲ್ಲವೂ ಗೊತ್ತು" ಎಂದು ಮಿಠಾಯಿ ತರಿಸುವದಕ್ಕೆ ಗಡಿಬಿಡಿಯಿಂದ ಕೆಳಗೆ ಹೋದಳು.

ಲಲಿತೆಯು ಅಲ್ಲಿಯೇ ಕುಳಿತು ಆ ಹೂಗಳ ಮಾಲೆಯನ್ನು ಮಾಡುವದಕ್ಕಾರಂಭಿಸಿದಳು.

"ಎಲ್ಲರಿಗೂ ಸುಳ್ಳ್ಯಾತಣ ಹೇಳಿ ಬಂದೆ. ಶೇಖರಣ್ಣ ಒಬ್ಬರು ಮಾತ್ರ ಉಳಿದಿದ್ದಾರೆ. ಹೋಗಿ ಹೇಳಿ ಬರುತ್ತೇನೆ. ಹೇಳದಿದ್ದರೆ ಆವರು ಬಹಳ ವ್ಯಥೆಪಟ್ಟುಕೊಳ್ಳುತ್ತಾರೆ" ಎಂದವಳೇ ಕಾಲಿಯು ಶೇಖರನಾಥರ ಮನೆಗೆ ಹೊರಟುಹೋದಳು.

ಅನ್ನಾಕಾಲಿ ಒಳ್ಳೇ ಹುಷಾರ ಹುಡುಗಿ. ಸರ್ವಕಾರ್ಯಗಳನ್ನೂ ವಿಧಿ-ವಿಧಾನದಿಂದ ಮಾಡುತ್ತಾಳೆ. ಶೇಖರಣ್ಣನಿಗೆ ಔತಣ ಕೊಟ್ಟು ಬಂದು "ಲಲಿತಕ್ಕ, ಶೇಖರಣ್ಣ ಒಂದು ಮಾಲೆ ಬೇಡುತ್ತಾರೆ. ಅವರಿಗೆ ನೀವೇ ಬೇಗನೆ ಹೋಗಿ ಕೊಟ್ಟು ಬನ್ನಿ. ನಾನು ಇಲ್ಲಿಯ ಕೆಲಸವನ್ನು ನೋಡಿಕೊಳ್ಳುತ್ತೇನೆ. ಮದುವೆಯ ಮುಹೂರ್ತ ಬಹಳ ಸಮೀಪಕ್ಕೆ ಬಂತು. ಇನ್ನು ಸಮಯ ಹೆಚ್ಚಿಗೆ ಇಲ್ಲ" ಎಂದಳು.

"ಇದು ನನ್ನಿಂದಾಗದ ಕೆಲಸ, ಕಾಲೀ. ನೀನೇ ಕೊಟ್ಟು ಬಾ."

"ಹಾಗಾದರೆ ಆ ದೊಡ್ಡ ಮಾಲೆಯನ್ನೇ ಕೊಡಿ. ಬೇಗನೇ ಹೋಗಿ ಕೊಟ್ಟು ಬಂದುಬಿಡುತ್ತೇನೆ" ಎಂದು ಕೈ ನೀಡಿದಳು.

ಕಾಲಿಯ ಕೈಯಲ್ಲಿ ಮಾಲೆಯನ್ನು ಕೊಡುತ್ತ ಕೊಡುತ್ತ ಯೋಚಿಸಿ ನಿಂತಳು. ಮಾಲೆಯನ್ನು ಕೊಡಲಿಲ್ಲ. "ಒಳ್ಳೇದು, ಹಾಗಾದರೆ ನಾನೇ ಕೊಟ್ಟುಬರುತ್ತೇನೆ" ಎಂದಳು ಲಲಿತಾ.

ಕಾಲಿಯು ಹಿರಿಯ ಹೆಂಗಸರಂತೆ ಸ್ವಲ್ಪ ಕೋಪದಿಂದ "ಹಾಗೆಯೇ ಮಾಡಿ, ನನಗೆ ಹೊರಲಾರದಷ್ಟು ಕೆಲಸ ಬಿದ್ದಿದೆ ಮಾಡೋಕೆ. ಸಾಯೋದಕ್ಕೆ ಕೂಡ ಸಮಯವಿಲ್ಲ" ಎಂದಳು.

ಕಾಲಿಯು ಹೇಳುವ ರೀತಿಯನ್ನು, ಭಾವವನ್ನು ನೋಡಿ ಲಲಿತೆಯು ನಕ್ಕಳು. "ಹಿರಿಯ ಹೆಂಗಸಾಗಿದ್ದೀಯಾ!" ಎಂದು ಹೊರಟು ಹೋದಳು. ಶೇಖರನ ಮನೆಗೆ ಹೋಗಿ, ಅವನ ರೂಮಿಗೆ ಹೋದಳು. ಹೊರಗೆ ನಿಂತು ಕಿಡಿಕಿಯಲ್ಲಿ ಇಣಿಕಿ ನೋಡಿದಳು. ಶೇಖರ ಏಕಾಗ್ರ ಭಾವದಿಂದ ಪತ್ರವನ್ನು ಬರೆಯುತ್ತಿದ್ದ. ಮೆಲ್ಲನೆ ಬಾಗಿಲು ತೆರೆದು ಒಳಗೆ ಹೋದಳು. ಮೆಲ್ಲಮೆಲ್ಲನೆ ಹೆಜ್ಜೆಗಳನ್ನಿಕ್ಕುತ್ತ ಶೇಖರನ ಕುರ್ಚಿಯ ಹಿಂದೆ ಹೋಗಿ ನಿಂತಳು. ಇಷ್ಟಾದರೂ ಲಲಿತೆಯು ಬಂದದ್ದು ಅವನಿಗೆ ಗೊತ್ತಾಗಲಿಲ್ಲ. ಸ್ವಲ್ಪ ಹೊತ್ತು ಹಾಗೆಯೇ ನಿಂತು ಅವನನ್ನು ಚಕಿತಪಡಿಸಬೇಕೆಂದು ಅವಳು ಅತ್ಯಂತ ಜಾಗರೂಕತೆಯಿಂದ ಅವನ ಕೊರಳಲ್ಲಿ ಮೆಲ್ಲನೆ ಮಾಲೆಯನ್ನು ಹಾಕಿದವಳೇ ಕುರ್ಚಿಯ ಕೆಳಗೆ ತ್ವರೆಯಿಂದ ಕುಳಿತುಬಿಟ್ಟಳು.

ಶೇಖರನು ಬೆಚ್ಚಿಬಿದ್ದು "ಕಾಲಿ!" ಎಂದ. ಹಿಂತಿರುಗಿ ನೋಡಿ ಅತ್ಯಂತ ಗಂಭೀರನಾಗಿ "ಇದನ್ನೇನು ಮಾಡಿದೆ ಲಲಿತಾ!" ಎಂದ.

ಲಲಿತೆಯು ಎದ್ದು ನಿಂತು ಶೇಖರನ ಮುಖದ ಮೇಲಿನ ಭಾವವನ್ನು ಓದಿದಳು. ಸ್ವಲ್ಪ ಸಂಶಯದಿಂದ "ಏಕೆ, ಏನಾಯಿತು?" ಎಂದಳು.

ಶೇಖರ ಪುನಃ ಅದೇ ಗಂಭೀರ ಭಾವದಿಂದ "ನಿನಗೆ ಗೊತ್ತಿಲ್ಲವೇ? ಹೋಗು ಹಾಗಾದರೆ, ಕಾಲಿಯನ್ನು ಕೇಳಿ ಬಾ— ಈಪೊತ್ತು ರಾತ್ರಿ ಕೊರಳಲ್ಲಿ ಮಾಲೆಯನ್ನು ಹಾಕುವದರಿಂದ ಏನಾಗುತ್ತೆ ಅಂತ!" ಎಂದ.

ಈವಾಗ ಶೇಖರನ ಮಾತಿನ ಅರ್ಥವಾಯಿತು. ಅವನ ಮಾತಿನ ಅರ್ಥವು ಮಿಂಚಿನಂತೆ ಅವಳ ಹೃದಯವನ್ನು ಹೊಕ್ಕು ಕಣ್ಣುಗಳ ಮಾರ್ಗವಾಗಿ ಹೊರಗೆ ಬಂದು ಮುಖದ ಮೇಲೆ ನಲಿದಾಡಲಾರಂಭಿಸಿತು. ಅವಳ ಮುಖಮಂಡಲವು ನಾಚಿಕೆಯಿಂದ ಕೆಂಪೇರಿತು. "ಇಲ್ಲ, ಇಲ್ಲ, ಹಾಗೆಂದಿಗೂ ಆಗುವದಿಲ್ಲ" ಎನ್ನುತ್ತ ಭರದಿಂದ ಹೊರಟುಹೋದಳು.

ಶೇಖರನು ಲಲಿತೆಯನ್ನು ಕೂಗಿ "ಗೊತ್ತಾಗಲಿಲ್ಲವೇ ಲಲಿತಾ ಕೇಳೇ ಕೇಳು—ಅಗತ್ಯವಾದುದೊಂದು ಕೆಲಸವಿದೆ" ಎಂದ.

ಶೇಖರನ ದನಿಯು ಅವಳಿಗೆ ಕೇಳಿಸಿತು. ಆದರೂ ಮಾತುಗಳನ್ನು ಕೇಳಲು ಅವಳು ನಿಲ್ಲಲಿಲ್ಲ. ಮಧ್ಯದಲ್ಲಿ ಎಲ್ಲಿಯೂ ನಿಲ್ಲದೆ ಓಡುತ್ತ ತನ್ನ ರೂಮಿಗೆ ಬಂದಳು. ಕಂಣು ಮುಚ್ಚಿಕೊಂಡು ಹಾಸಿಗೆಯ ಮೇಲೆ ಬಿದ್ದುಕೊಂಡಳು.

ಐದು ಆರು ವರ್ಷಗಳಿಂದ ಶೇಖರನ ಸಂಗಡ ಇದ್ದುಕೊಂಡು ಇಷ್ಟು ದೊಡ್ಡವಳಾಗಿದ್ದಾಳೆ. ಆದರೆ ಎಂದೂ ಅವನ ಬಾಯಿಂದ ಇಂದಿನಂತಹ ನುಡಿಯನ್ನು ಕೇಳಲಿಲ್ಲ. ಶೇಖರನ ಸ್ವಭಾವ ಸಾಗರದಂತೆ ಗಂಭೀರವಾದುದು. ಅವನು ಎಂದೂ ತಮಾಷೆ ಮಾಡುತ್ತಿರಲಿಲ್ಲ. ಒಂದೊಂದು ಸಲ ತಮಾಷೆ ಮಾಡಿದರೂ ಇಷ್ಟು ದೊಡ್ಡ ಮಾತನ್ನು ಇಷ್ಟು ತಮಾಷೆಯಿಂದ ಆಡಬಲ್ಲನೆಂಬುದರ ಕಲ್ಪನೆಯು ಅವಳಿಗಿರಲಿಲ್ಲ. ನಾಚಿಕೆಯಿಂದ ಇಪ್ಪತ್ತು ನಿಮಿಷ ಮುದುಡಿಕೊಂಡು ಮಲಗಿ ಮತ್ತೆ ಎದ್ದು ಕುಳಿತಳು. ಶೇಖರನಿಗೆ ಅಂಜುತ್ತಿದ್ದಳು. ಅಗತ್ಯವಾದ ಕೆಲಸ

ವಿದೆಯೆಂದು ಒಳಗೆ ಕೂಗಿದರು. ಹೋಗಲೋ ಬೇಡವೋ ಎಂದು ಯೋಚಿಸತೊಡಗಿದ್ದಳು. ಇಷ್ಟರಲ್ಲಿ ದಾಸಿಯು ಬಂದು "ಶೇಖರ ಬಾಬೂ ನಿಮ್ಮನ್ನು ಕರೆಯುತ್ತಿದ್ದಾರೆ" ಎಂದು ಹೇಳಿದಳು.

"ನಾನು ಬರುತ್ತೇನೆ, ನೀನು ನಡೆ" ಎಂದು ದಾಸಿಯನ್ನು ಕಳಿಸಿ ಮೇಲಕ್ಕೆ ಹೋದಳು. ಶೇಖರಣ್ಣ ಪತ್ರ ಬರೆಯುವುದರಲ್ಲಿಯೇ ಇದ್ದ. ಇನ್ನೂ ಪತ್ರ ಬರೆಯುವುದು ಮುಗಿದಿರಲಿಲ್ಲ. ಸ್ವಲ್ಪ ಹೊತ್ತು ಸುಮ್ಮ ನಿದ್ದು ಕೇಳಿದಳು "ಏತಕ್ಕೆ ಕರೆದಿದ್ದಿರಿ ?"

ಪತ್ರ ಬರೆಯುತ್ತ "ಸಮೀಪಕ್ಕೆ ಬಾ, ಹೇಳುತ್ತೇನೆ" ಎಂದ ಶೇಖರ.

"ಇಲ್ಲ. ಇಲ್ಲಿಂದಲೇ ಕೇಳುವೆ. ಹೇಳಿಬಿಡಿ."

ಶೇಖರನಿಗೆ ಮನದಲ್ಲಿ ನಗು. "ಆಡಆಡುತ್ತಾ ಏನು ಮಾಡಿ ಬಿಟ್ಟೆ ಹೇಳು ನೋಡೋಣ ?" ಎಂದ.

"ಸಾಕು ಹೋಗಿ. ಮತ್ತೆ ಮತ್ತೆ ಅದೇ ಮಾತು !"

"ನನ್ನದೇನು ತಪ್ಪು ? ನೀನೇ ಮಾಡಿದೆ—"

"ನಾನೇನೂ ಮಾಡಲಿಲ್ಲ. ಹಿಂತಿರುಗಿ ಕೊಟ್ಟುಬಿಡಿ ಅ ದನ್ನ."

"ಇದಕ್ಕೋಸ್ಕರವೇ ನಿನ್ನನ್ನು ಕರೆಕಳುಹಿದ್ದು ಲಲಿತಾ. ಸಮೀ ಪಕ್ಕೆ ಬಾ, ಹಿಂತಿರುಗಿ ಕೊಡುತ್ತೇನೆ. ಕೆಲಸವನ್ನು ಅರ್ಧಕ್ಕೆ ಬಿಟ್ಟು ಹೋದೆ, ಪೂರ್ತಿ ಮಾಡಲಿಲ್ಲ. ಸರಿದು ಬಾ ಹತ್ತಿರಕ್ಕೆ. ನಾನು ಆ ಕೆಲಸವನ್ನು ಪೂರ್ತಿ ಮಾಡುತ್ತೇನೆ."

"ಸಾಕು ಮಾಡಿ, ನಿಮ್ಮ ತಮಾಷೆನ. ನೀವು ಹೀಗೆ ಮಾಡಿದರೆ ನಾನು ಇನ್ನೆಂದಿಗೂ ನಿಮ್ಮ ಹತ್ತಿರ ಬರೋದಿಲ್ಲ,—ಕೊಡಿ ಬೇಗನೇ, ಮಾಲೆಯನ್ನು ವಾಪಸುಕೊಡಿ."

ಲೆಕ್ಕಣಿಕೆಯನ್ನು ಕೈಯಲ್ಲಿ ತೆಗೆದುಕೊಂಡು ಪತ್ರದ ಕಡೆ ನೋಡುತ್ತ "ತೆಗೆದುಕೊಂಡು ಹೋಗು ಅಂತಾ ಹೆಳ್ತೀನೆ" ಎಂದ.

"ಅಲ್ಲಿಂದಾನೇ ಎಸೆದುಬಿಡಿ."

"ಸಮೀಪಕ್ಕೆ ಬಂದ ವಿನಾ ಸಿಕ್ಕಲಾರದು."

"ಹಾಗಾದರೆ ಅದು ನನಗೆ ಬೇಕಾಗಿಲ್ಲ" ಎಂದವಳೇ ಕೋಪಿಸಿಕೊಂಡು ಹೊರಟುಹೋದಳು.

ಲಲಿತೆಯು ಹೋದಳು, ಆದರೆ ಕೆಳಗೆ ಹೋಗಲಿಲ್ಲ. ಪೂರ್ವದ ಕಡೆ ತೆರೆದಿದ್ದ ಮಾಳಿಗೆಯ ಮೇಲೆ ಹೋಗಿ ಶಿಂಗು ಹಿಡಿದುಕೊಂಡು ಸುಮ್ಮನೆ ನಿಂತಳು. ಎದುರಿನಲ್ಲಿ ಚಂದ್ರನು ಉದಯಿಸಿದ್ದ. ಚಳಿಗಾಲವಿದ್ದುದರಿಂದ ಬೆಳದಿಂಗಳು ಅಷ್ಟು ಶುಭ್ರವಾಗಿದ್ದಿಲ್ಲ. ಮುಸಕುಮುಸಕಾಗಿ ಸರ್ವತ್ರ ಹರಡಿತ್ತು. ನೆತ್ತಿಯ ಮೇಲೆ ಶುಭ್ರವಾದ ಆಕಾಶ. ಒಂದು ಸಲ ಶೇಖರನ ರೂಮಿನ ಕಡೆಗೆ ನೋಡಿ ಆಕಾಶವನ್ನು ನೋಡಲಾರಂಭಿಸಿದಳು. ಈವಾಗ ಅವಳ ಕಂಣುಗಳು ಚಂದ್ರಮನ ಶೀತಲ ಕಿರಣಗಳಿಂದಲೂ ತಣ್ಣಗಾಗಲಿಲ್ಲ. ಉರಿಯುತ್ತಿದ್ದವು. ನಾಚಿಕೆ ಮತ್ತು ಕೋಪದಿಂದ ಕಂಣುಗಳಲ್ಲಿ ಕಂಬನಿಗಳು ತುಂಬಿದವು. ಶೇಖರನ ಮಾತುಗಳ ಅರ್ಥವನ್ನರಿಯುವಷ್ಟು ಅವಳು ಚಿಕ್ಕವಳಿಲ್ಲ. ಮತ್ತೆ ಅವಳ ಮರ್ಮಸ್ಥಳದ ಮೇಲೆ ಪೆಟ್ಟನ್ನು ಹಾಕುವಂತಹ ಈ ಉಪಹಾಸದ ಆವಶ್ಯಕತೆ ಏಕೆ? ತಾನು ಎಷ್ಟು ತುಚ್ಛಳು, ಕೀಳಳು ಎನ್ನುವದರ ಅರಿವು ಆಗುವಷ್ಟು ಅವಳು ದೊಡ್ಡವಳಾಗಿದ್ದಾಳೆ. ತಾನು ಅನಾಥಳೂ ನಿರುಪಾಯಳೂ ಆಗಿರುವದರಿಂದಲೇ ತನ್ನನ್ನು ಎಲ್ಲರೂ ಆದರಿಸುತ್ತಾರೆ, ಪ್ರೀತಿಸುತ್ತಾರೆ ಎನ್ನುವದೆಲ್ಲ ಅವಳಿಗೆ ಚೆನ್ನಾಗಿ ಗೊತ್ತು. ಶೇಖರನೂ ಶೇಖರನ ತಾಯಿಯೂ ಇದೇ ದೃಷ್ಟಿಯಿಂದ ತನ್ನನ್ನು ಪ್ರೀತಿಸುತ್ತಾರೆ. ತನ್ನವರು ಎನ್ನುವವರು ಈ ಸಂಸಾರದಲ್ಲಿ ಅವಳಿಗೆ ಯಾರೂ ಇಲ್ಲ, ಅವಳ ಮೇಲೆ ಯಾರ ಅಧಿಕಾರವೂ ಇಲ್ಲ ಎನ್ನುವದನ್ನು ತಿಳಿದುಕೊಂಡೇ ಅತ್ಯಂತ ಪರಕೀಯನಾದರೂ ಅವಳ ಉದ್ಧಾರ ಮಾಡುವೆನೆಂದು ಎಂದಿದ್ದ ಗಿರೀಂದ್ರ.

ಲಲಿತೆಯು ಕಣ್ಣುಗಳನ್ನು ಮುಚ್ಚಿಕೊಂಡೇ ಮನದಲ್ಲಿ ಯೋಚಿಸತೊಡಗಿದಳು—ಕಲ್ಕತ್ತೆಯ ಈ ಸಮಾಜದಲ್ಲಿ ತನ್ನ ಮಾವನಿಗೆ ಸ್ಥಾನವಿಲ್ಲ. ಇದ್ದರೂ ಎಷ್ಟು ಕೀಳಾಗಿದೆ! ಅವರು ಎಷ್ಟು ಕೆಳಗಿದ್ದಾರೆ!

ಇಂತಹ ಮಾವನ ಆಶ್ರಯದಲ್ಲಿ ಇದ್ದುಕೊಂಡು ನಾನು ಅವನಿಗೆ ಒಂದು ನೇಣಿನ ನುಲಿಯಾಗಿದ್ದೇನೆ. ಅತ್ತ ಸರಿಸಮಾನಸ್ಕಂದರ ಮನೆಯಲ್ಲಿ ಶೇಖರನ ಮದುವೆಯ ಮಾತೂ ನಡೆದಿದೆ. ಒಂದೆರಡು ದಿನ ತಡವಾದರೂ ಅದೇ ಮನೆಯಲ್ಲಿ ಶೇಖರನ ವಿವಾಹವಾಗುವದು ನಿಶ್ಚಯ. ಈ ಮದಿವೆಯಲ್ಲಿ ನವೀನರಾಯನ ಕೈಗೆ ಹೇರಳವಾಗಿ ಹೊನ್ನು ದೊರೆಯುವದೆಂದು ಭುವನೇಶ್ವರೀದೇವಿಯವರು ಹೇಳಿದ್ದಾರೆ.

ಆದರೆ ಪುನಃ ಶೇಖರನಾಥರು ತನ್ನ ಅಪಮಾನವನ್ನು ಇಂತೇಕೆ ಮಾಡಿಬಿಟ್ಟರು! ಇವೆಲ್ಲ ಮಾತುಗಳನ್ನು ಲಲಿತೆಯು ಆಕಾಶದ ಕಡೆಗೆ ಶೂನ್ಯದೃಷ್ಟಿಯಿಂದ ನೋಡುತ್ತ, ಪ್ರಮರಿತು ಯೋಚಿಸುತ್ತ ನಿಂತಿದ್ದಳು. ಒಮ್ಮೆಲೆ ಬೆಚ್ಚಿಬಿದ್ದು ಹಿಂತಿರುಗಿ ನೋಡಿದಳು—ಶೇಖರ ನಗುತ್ತ ನಿಂತಿದ್ದ. ಸ್ವಲ್ಪ ಸಮಯದ ಪೂರ್ವದಲ್ಲಿ ಯಾವ ರೀತಿಯಿಂದ ಶೇಖರನ ಕೊರಳಲ್ಲಿ ಮಾಲೆಯನ್ನು ಹಾಕಿದ್ದಳೋ ಅದೇ ರೀತಿಯಾಗಿ ಆ ಚೆಂಡುಹೂವಿನ ಮಾಲೆಯು ಹಿಂತಿರುಗಿ ಅವಳ ಕೊರಳಲ್ಲಿ ಬಂದು ಬಿದ್ದಿತ್ತು. ಅಳುವು ಬಂತು. ಕಂಠವು ಗದ್ಗದವಾಯಿತು ಅದನ್ನು ಹೊರಗೆ ತೋರಗೊಡದೆ, ಅತ್ಯಂತ ಪ್ರಯತ್ನಮಾಡಿ ಭಗ್ನಸ್ವರದಿಂದ "ಹೀಗೇಕೆ ಮಾಡಿದಿರಿ?" ಎಂದಳು.

"ನೀನೇಕೆ ಮಾಡಿದ್ದೆ?"

"ಏತಕ್ಕೂ ಮಾಡಲಿಲ್ಲ" ಎಂದವಳೇ ಹಾರವನ್ನು ಹರಿಯುವದಕ್ಕೆ ಕರವನ್ನು ಎತ್ತಿದಳು. ಇಷ್ಟರಲ್ಲಿ ಅವಳಿಗೆ ಶೇಖರನ ನೇತ್ರಗಳು ದೃಷ್ಟಿಗೋಚರವಾದವು. ಹಾಗೆಯೇ ಕೈಯನ್ನು ಹಿಂತೆಗೆದಳು. ಮಾಲೆಯನ್ನು ಹರಿಯುವ ಧೈರ್ಯವು ಆಗಲಿಲ್ಲ. ರೋದಿಸುತ್ತ "ನನಗಾರೂ ಇಲ್ಲ, ಆದುದರಿಂದಲೇ ಈ ರೀತಿ ನನ್ನ ಅಪಮಾನ ಮಾಡುತ್ತಿದ್ದೀರಿ!" ಎಂದಳು.

ಶೇಖರನು ಈ ವರೆಗೂ ನಗುತ್ತಿದ್ದ. ಲಲಿತೆಯ ಈ ನುಡಿಗಳನ್ನು ಕೇಳಿ ಸ್ತಂಭಿತನಾದ. ಇವು ಬಾಲಿಕೆಯರ ಮಾತುಗಳಲ್ಲ! "ನಾನು ನಿನ್ನ ಅವಮಾನ ಮಾಡುತ್ತಿದ್ದೇನೋ ಅಥವಾ ನೀನು ನನ್ನ

ಅವಮಾನ ಮಾಡುತ್ತಿದ್ದೀಯೋ ? ” ಎಂದ.

ಲಲಿತೆಯು ಕಣ್ಣೊರೆಸುತ್ತ, ಅಂಜುತ್ತ ಅಂಜುತ್ತ “ ನಾನಾವಾಗ ನಿಮ್ಮ ಅವಮಾನ ಮಾಡಿದೆ ? ” ಎಂದಳು.

ಶೇಖರನು ಕ್ಷಣಹೊತ್ತು ತಡೆದು ಯಥಾಪ್ರಕಾರ ಮಮತೆಯಿಂದ “ ಸ್ವಲ್ಪ ಸಮಾಧಾನದಿಂದ ಯೋಚಿಸಿ ನೋಡು. ಎಲ್ಲವೂ ನಿನಗೆ ಗೊತ್ತಾಗುವದು. ಈವಾಗ ಕೆಲವು ದಿನಗಳಿಂದ ನೀನು ಮನಬಂದಂತೆ ಮಾಡುತ್ತಿದ್ದೆ. ಯಾತ್ರೆಗೆ ಹೊರಡುವ ಪೂರ್ವದಲ್ಲಿ ಅದನ್ನೇ ನಾನು ನಿಲ್ಲಿಸಿದ್ದೇನೆ ಲಲಿತಾ ! ” ಎಂದ.

ಇರ್ವರೂ ಕ್ಷಣಹೊತ್ತು ಮಾತನಾಡಲಿಲ್ಲ. ಲಲಿತೆಯು ತಲೆ ಬಾಗಿಸಿಕೊಂಡು ನಿಂತಿದ್ದಳು. ಚಂದ್ರಮನು ತನ್ನ ಷೋಡಶಕಲೆಗಳ ಸಾಮ್ರಾಜ್ಯವನ್ನು ಸರ್ವತ್ರ ಸ್ಥಾಪಿಸಿದ್ದನು. ಮಹಡಿಯ ಕೆಳಗೆ ಕಾಲಿಯ ಬೊಂಬೆಯ ಮದಿವೆಯ ಮಂಗಲವಾದ್ಯವು ಬಾರಿಸುತ್ತಿತ್ತು. ಅದರ ಮಂಜುಳನಾದವು ಚಂದ್ರನ ಕೌಮುದೀ-ತಂಬೂರಿಯ ಇನಿದಾದ ನಾದದಲ್ಲಿ ಬೆರೆತು ಅತ್ಯಂತ ಮೃದುಮಧುರವಾಗಿ ಕೇಳಬರುತ್ತಿತ್ತು. ಕ್ಷಣಹೊತ್ತು ಮಂಗಲವಾದ್ಯವನ್ನು ಆಲಿಸಿದ ಮೇಲೆ “ ಈವಾಗ ಇಲ್ಲಿ ಚಳಿಯಲ್ಲಿ ನಿಲ್ಲ ಬೇಡ; ಕೆಳಕ್ಕೆ ಹೋಗು ” ಎಂದ ಶೇಖರ.

ಇಷ್ಟು ಸಮಯದವರೆಗೂ ಸುಮ್ಮನಿದ್ದ ಲಲಿತೆ “ ಹೋಗುವೆ ” ಎಂದು ಶೇಖರನ ಪಾದಗಳ ಮೇಲೆ ತನ್ನ ಚಂದ್ರಭಾಲವನ್ನಿಟ್ಟು ವಂದಿಸಿ ಎದ್ದುನಿಂತು “ ಇನ್ನು ಮುಂದೆ ನಾನೇನು ಮಾಡಬೇಕೆನ್ನುವದನ್ನು ಹೇಳಿ ಹೋಗಿ ” ಎಂದಳು.

ಶೇಖರ ನಕ್ಕ. ಮನದೊಳಗೆ ಸ್ವಲ್ಪ ಹಿಂಜರಿದ. ಬಳಿಕ ಅವಳನ್ನು ತನ್ನ ಎರಡೂ ಕೈಗಳಿಂದ ಎಳೆದುಕೊಂಡು ಅತ್ಯಂತ ಒಲವಿನ ವೇಗದಿಂದ ಅಪ್ಪಿಕೊಂಡ. ಮನೋಹರವಾದ ಅವಳ ಮುಖದ ಮೇಲೆ ಮಧುರವಾದ ಮುದ್ದನ್ನಿಟ್ಟ. “ ನಾನೇನೂ ನಿನಗೆ ಹೇಳಬೇಕಾದುದಿಲ್ಲ. ಇಂದಿನಿಂದ ಅದು ನಿನಗೆ ತಾನೇ ತಿಳಿಯುವದು ” ಎಂದು ನುಡಿದ.

ಲಲಿತೆಯು ಅತ್ಯಂತ ಪುಲಕಿತಳಾಗಿದ್ದಳು. ಸ್ವಲ್ಪ ಹಿಂದಕ್ಕೆ

ಸರಿದು ನಿಂತು “ ಸರಿ, ಆಕಸ್ಮಾತ್ ನಿಮ್ಮ ಕೊರಳಲ್ಲಿ ಮಾಲೆ ಹಾಕಿದ್ದ ರಿಂದ ಹೀಗೆ ಮಾಡಿದಿರೊ ? ” ಎಂದಳು.

ಶೇಖರ ನಗುತ್ತ “ ಇಲ್ಲ, ಹೀಗೇನೂ ಇಲ್ಲ. ಬಹಳದಿನಗಳಿಂದ ಯೋಚಿಸುತ್ತಿದ್ದೆ. ತಕ್ಕ ಸಮಯವು ಸಿಕ್ಕದೆ ಅದು ಸಾಧ್ಯವಾಗಿರಲಿಲ್ಲ. ಈಹೊತ್ತು ಸಮಯವು ದೊರಕಿತು. ನನಗೆ ಭರವಸೆಯಾಯಿತು—ನಿನ್ನ ಹೊರತು ನಾನಿರಲಾರೆ—ಇದನ್ನು ನಾನಿಂದೇ ಚೆನ್ನಾಗಿ ಅನುಭವಿಸಿದೆ ” ಎಂದ

“ ನಿಮ್ಮ ತಂದೆಯವರು ಇದನ್ನು ಕೇಳಿದರೆ ಕಂಗಳಿಂದ ಕಿಡಿ ಗಳನ್ನು ಉಗುಳುವರು, ಅಮ್ಮನವರಿಗೂ ದುಃಖವಾಗುವದು. ಹೀಗಾ ಗದು ಶೇ— ”

ಲಲಿತೆಯು ಮಾತು ಮುಗಿಸುವದಕ್ಕೆ ಮುಂಚೆಯೆ “ ನಿಜ. ಇದನ್ನು ಕೇಳಿ ತಂದೆಯವರು ಸಿಟ್ಟಾಗುವರು. ಆದರೆ ತಾಯಿಯವರು ಆನಂದದ ಉದಧಿಯಲ್ಲಿ ತೇಲಾಡುವರು. ಆಯಿತು. ಆಗಬೇಕಾದದ್ದೇ ಆಯಿತು. ಇನ್ನಾವ ಭಯವೂ ಇಲ್ಲ. ಇನ್ನಾರ ಅಂಜಿಕೆಯೂ ಇಲ್ಲ. ಈ ಬಂಧನ ವನ್ನು ನೀನು ಮುರಿಯಲಾರೆ, ನಾನು ಮುರಿಯಲಾರೆ, ಯಾರೂ ಮುರಿಯ ಲಾರರು. ಹೋಗು ಲಲಿತಾ, ನನ್ನ ಲಾವಣ್ಯದ ರಾಶಿ, ಹೋಗು, ಅಮ್ಮನಿಗೆ ನಮಸ್ಕಾರಮಾಡು ” ಎಂದ ಶೇಖರ.

೮

ಸುಮಾರು ಮೂರು ತಿಂಗಳು ಕಳೆದ ಮೇಲೆ ನವೀನರಾಯರ ಮನೆಗೆ ಗುರುಚರಣರು ಬಂದರು. ಅವರನ್ನು ದೂರದಲ್ಲಿ ನೋಡುತ್ತಲೇ ನವೀನರಾಯರು “ ಹಾಂ ಹಾಂ. ಅಲ್ಲಿಯೇ ಕುಳಿತುಕೊಳ್ಳಿ ಮಣೆಯ ಮೇಲೆ. ಸಮೀಪಕ್ಕೆ ಬರಬೇಡಿ. ಈವಾಗ ನಾನು ಪುನಃ ಸ್ನಾನ ಮಾಡಲಾರೆ. ನೀವು ಜಾತಿಭ್ರಷ್ಟರಾದಿರೊ ಇಲ್ಲವೊ ? ಹೇಳಿ ” ಎಂದರು.

ಬಡ ಗುರುಚರಣರು ದೂರದಲ್ಲಿ ಮಣೆಯ ಮೇಲೆ ಮುಖ ಕೆಳಗೆ ಮಾಡಿಕೊಂಡು ಕುಳಿತರು. ನಾಲ್ಕು ದಿನ ಮುಂಚೆ ಅವರು ದೀಕ್ಷೆ ತೆಗೆದು ಕೊಂಡು ಬ್ರಹ್ಮಸಮಾಜಕ್ಕೆ ಸೇರಿದರು. ಈವಾಗ ಅವರು ಬ್ರಹ್ಮಸಮಾಜ

ದವರು. ಈ ಸುದ್ದಿ ಬೆಳೆಯುತ್ತ ಬೆಳೆಯುತ್ತ ದೊಡ್ಡದಾಗಿ ಅತ್ಯಂತ ರುಚಿಕರವಾಗಿ ಬಂದು ನವೀನರಾಯರ ಕಿವಿಗೆ ಬಿದ್ದಿತ್ತು. ಇಷ್ಟರಲ್ಲಿ ಗುರುಚರಣರೂ ಅವರ ಮನೆಗೆ ಬಂದರು. ಅವರನ್ನು ನೋಡುತ್ತಲೇ, ನವೀನರಾಯರ ನೇತ್ರಗಳಿಂದ ಕಿಡಿಗಳು ಹಾರಲಾರಂಭಿಸಿದವು. ಆದರೆ ಗುರುಚರಣರು ಹಾಗೆಯೇ ತಲೆಬಾಗಿಸಿಕೊಂಡು ಕುಳಿತಿದ್ದರು. ದೀಕ್ಷೆಯನ್ನು ತೆಗೆದುಕೊಳ್ಳುವಾಗ ಯಾರಿಗೂ ಹೇಳಲಿಲ್ಲ. ಬ್ರಹ್ಮಸಮಾಜಕ್ಕೆ ಸೇರಿದ ದಿನದಿಂದಲೇ ಮನೆಯಲ್ಲಿ ರೋದನಕ್ಕೆ ಆರಂಭವಾಗಿದೆ. ಶಾಂತಿ ಸಮಾಧಾನಕ್ಕೆ ಸ್ಥಾನವೇ ಇಲ್ಲ. ಎಷ್ಟು ಹುಡುಕಿದರೂ ಮನೆಯಲ್ಲಿ ಆನಂದವು ಸಿಗಲೊಲ್ಲದು.

"ಹೇಳಿ, ಈ ಸುದ್ದಿ ಸುಳ್ಳೋ, ನಿಜವೋ?" ಗರ್ಜಿಸಿ ಕೇಳಿದರು ನವೀನರಾಯರು.

ಕಂಬನಿ ತುಂಬಿದ ಕಂಣುಗಳನ್ನು ಮೇಲಕ್ಕೆತ್ತಿ "ನಿಜವು ರಾಯರೆ" ಎಂದರು ಗುರುಚರಣರು.

"ಇಂತಹ ಕೆಲಸವನ್ನೇಕೆ ಮಾಡಿದಿರಿ ನೀವು? ೬೦ ರೂಪಾಯಿ ಸಂಬಳ ಮಾತ್ರ ಬರುತ್ತದೆ ನಿಮಗೆ—ಮತ್ತು ನೀವು—" ಕ್ರೋಧದಿಂದ ಶಬ್ದಗಳೇ ಹೊರಡದಾದವು ನವೀನರಾಯರ ಮುಖದಿಂದ.

ಕಂಬನಿಗಳನ್ನು ಉಜ್ಜಿಕೊಂಡು, ಕೆಮ್ಮಿ ಗದ್ಗದಕಂಠವನ್ನು ಸರಿಮಾಡಿಕೊಂಡು ಗುರುಚರಣರು "ಏನು ಹೇಳಲಿ ರಾಯರೆ? ಬುದ್ಧಿ ಭ್ರಮೆ. ಬ್ರಹ್ಮಸಮಾಜದಲ್ಲಿ ಸೇರಲೋ ಅಥವಾ ನೇಣು ಹಾಕಿಕೊಂಡು ಸತ್ತುಹೋಗಲೋ ಎನ್ನುವಮ ದುಃಖದಲ್ಲಿ ಗೊತ್ತಾಗಲಿಲ್ಲ. ಕೊನೆಯಲ್ಲಿ ಆತ್ಮಹತ್ಯ ಮಾಡಿಕೊಳ್ಳುವದಕ್ಕಿಂತ ಬ್ರಹ್ಮಸಮಾಜದಲ್ಲಿ ಸೇರ್ಪುವದೇ ಒಳ್ಳೆಯದೆಂದು ಎನಿಸಿತು" ಎಂದರು.

ನವೀನರಾಯರು ಗಟ್ಟಿಯಾಗಿ "ಸರಿ, ಒಳ್ಳೆಯದನ್ನು ಮಾಡಿದಿರಿ. ಸ್ವತಃ ನೇಣುಹಾಕಿಕೊಳ್ಳುವದನ್ನು ಬಿಟ್ಟು ಜಾತಿ-ಧರ್ಮವನ್ನು ಗಲ್ಲಿಗೇರಿಸಿದಿರಿ! ಹೋಗಿ, ಇನ್ನು ನಮಗೆ ಮುಖವನ್ನು—ನಿಮ್ಮ ಅಪವಿತ್ರ ಮುಖವನ್ನು—ತೋರಿಸಬೇಡಿ. ನಿಮಗೆ ಸಲಹೆಗಳನ್ನು ಕೊಡುವವರ ಮತ್ತು

ಹಿತ ಮಾಡುವವರ ಬಳಿಯಲ್ಲಿಯೇ ಇರಿ. ನಿಮ್ಮ ಹುಡುಗಿಯರನ್ನು ಹೊಲೆಯರ ಹುಡುಗರಿಗೇ ಕೊಟ್ಟು ಮದಿವೆ ಮಾಡಿ " ಎಂದು ಗುರು ಚರಣರನ್ನು ಕಳಿಸಿ ಮುಖ ತಿರುಗಿಸಿಕೊಂಡು ಕುಳಿತರು. ಗುರುಚರಣರು ಕಂಬನಿಗಳನ್ನು ಒರೆಸಿಕೊಳ್ಳುತ್ತ ಎದ್ದುಹೋದರು.

ಸಿಟ್ಟಿನ ಭರದಲ್ಲಿ ಗುರುಚರಣರಿಗೆ ಏನು ದಂಡ ವಿಧಿಸಬೇಕೆನ್ನು ವದು ನವೀನರಾಯರಿಗೆ ಗೊತ್ತಾಗಲಿಲ್ಲ. ಗೊತ್ತಾಗಿದ್ದರೂ ಅವರು ತಮ್ಮ ಇಚ್ಛೆಯಂತೆ ಮಾಡಲು ಅಸಮರ್ಥರಾಗಿದ್ದರು. ಈವಾಗ ಗುರುಚರಣರು ಬಲೆಯೊಳಗಿಂದ ಪಾರಾಗಿಹೋಗಿದ್ದರು, ಪುನಃ ಸಿಕ್ಕುವ ಹಾಗೂ ಇದ್ದಿಲ್ಲ. ಆದುದರಿಂದ ಗುರುಚರಣರನ್ನು ಕೀಳು ದೃಷ್ಟಿಯಿಂದ ಹೇಗೆ ನೋಡ ಬೇಕು? ಕೊನೆಗೆ ಒಬ್ಬ ಆಳುಮಗನನ್ನು ಕರೆದು ಮಾಳಿಗೆಯ ಮೇಲೆ ಇದ್ದ ಬರಹೋಗುವ ದಾರಿಯನ್ನು ಕಟ್ಟುಮಾಡಿಸಿದರು. ಈ ವಿಧದಿಂದ ಅವರ ಕೋಪಾಗ್ನಿಯು ಕೊಂಚ ಆರಿತು.

ಪ್ರವಾಸದಲ್ಲಿದ್ದಾಗ ಈ ಸಮಾಚಾರವು ಭುವನೇಶ್ವರೀದೇವಿಯ ವರಿಗೆ ಶೇಖರನಿಂದ ತಿಳಿಯಿತು. ಕೇಳಿ ಅತ್ತರು ಅವರು. " ಶೇಖರ, ಈ ಸಲಹೆಯನ್ನು ಗುರುಚರಣರಿಗೆ ಯಾರು ಕೊಟ್ಟರು ? " ಎಂದರು.

ಸಲಹೆಕೊಟ್ಟವರು ಯಾರೆನ್ನುವದು ಶೇಖರನಿಗೆ ಗೊತ್ತಿತ್ತು. ಆದರೆ ಅವನು ಅದನ್ನು ಹೇಳಲಿಲ್ಲ. " ಅಮ್ಮಾ, ನೀವೆ ಅವರನ್ನು ಜಾತಿಯಿಂದ ಹೊರಗೆ ಹಾಕುತ್ತಿದ್ದಿರಿ ಸ್ವಲ್ಪ ದಿನಗಳಲ್ಲಿ. ಇಷ್ಟು ಜನ ಹುಡುಗಿಯರ ವಿವಾಹವನ್ನು ಸಕಾಲಕ್ಕೆ ಮಾಡುವದು ಅವರಿಂದ ಆಗು ತ್ತಿರಲಿಲ್ಲ. ಪಾಪ, ಬಡತನ. ವಿವಾಹ ಮಾಡುವದು ಸಾಧಾರಣ ಕಾರ್ಯ ವಲ್ಲ. ಅವರ ಬಗ್ಗೆ ಏನು ಮಾಡಬೇಕು? ಯಾವ ಉಪಾಯವೂ ತೋರುವ ದಿಲ್ಲ ಅಮ್ಮಾ" ಎಂದ ಶೇಖರ.

" ಏನು ಮಾಡೋಕೆ ಆಗುತ್ತೆ ಮಗೂ? ಹೀಗೆಯೇ ಯಾವ ಯೋಚನೇನೂ ಪ್ರಯತ್ನಾನೂ ಮಾಡದೆ ಜಾತಿಯನ್ನು ಧರ್ಮವನ್ನು ಬಿಟ್ಟುಬಿಡೋದು ಬುದ್ಧಿವಂತಿಕೆಯೋ ? ಮೂರ್ಖತನವೋ ? ಬೇಸತ್ತು ಧರ್ಮ ಬಿಡುವದಾದರೆ ಎಷ್ಟು ಜನರು ಬಿಡಬೇಕಾಗುವದು ಬಲ್ಲೆಯೊ !

ಹುಟ್ಟಿಸಿದ ದೇವರು ಹುಲ್ಲು ಮೇಯಿಸುವದಿಲ್ಲ. ಅವನೇ ಗುರುಚರಣರ ರಕ್ಷಣೆ ಮಾಡುತ್ತಿದ್ದ" ಎಂದರು ಭುವನೇಶ್ವರೀ ದೇವಿಯವರು.

ಶೇಖರನು ಸುಮ್ಮನಿದ್ದ.

ಭುವನೇಶ್ವರೀದೇವಿಯವರು ಕಂಬನಿಗಳನ್ನು ಒರೆಸಿಕೊಂಡು "ನಾನು ಲಲಿತೆಯನ್ನು ಸಂಗಡ ಕರೆದುಕೊಂಡು ಬಂದಿದ್ದರೆ ಚೆನ್ನಾಗಿರುತ್ತಿತ್ತು. ಏನಾದರೂ ಮಾಡಿ ನಾನವಳ ಉದ್ಧಾರಮಾಡುತ್ತಿದ್ದೆ. ಬಹುಶಃ ಇದನ್ನ ರಿತೀ ಉಪಾಯದಿಂದ ಗುರುಚರಣರು ನನ್ನೊಡನೆ ಲಲಿತೆಯನ್ನು ಕಳಿಸಿರ ಲಿಕ್ಕಿಲ್ಲನಷ್ಟೆ! ನಿಜವಾಗಿಯೂ ಅವಳ ಮದಿವೆಯ ತಯಾರಿ ನಡೆದಿದೆ ಎಂದು ನಾನು ಭಾವಿಸಿದ್ದೆ" ಎಂದರು.

ಶೇಖರ ನಾಚಿಕೆಯಿಂದ ತಾಯಿಯನ್ನು ನೋಡುತ್ತ "ಸರಿ ಹಾಗಾದರೆ, ಅಮ್ಮ. ಮನೆಗೆ ಹೋದಮೇಲೆ ಅವಳ ಬಗ್ಗೆ ಏನಾದರೂ ಉಪಾಯ ಮಾಡಬೇಕು. ಅವಳು ಬ್ರಹ್ಮಸಮಾಜಕ್ಕೆ ಸೇರಿಲ್ಲ. ಅವಳ ಮಾವ ಮಾತ್ರ ಸೇರಿದ್ದಾರೆ. ಮಾವನವರು ಅವಳಿಗೆ ಸಮೀಪದ ಆಪ್ತರೂ ಕೂಡ ಅಲ್ಲ. ಲಲಿತೆಗೆ ಯಾರೂ ದಿಕ್ಕಿಲ್ಲದ್ದರಿಂದಲೇ ಅವರ ಮನೆಯಲ್ಲಿದ್ದುಕೊಂಡು ಜೀವಿಸಬೇಕಾಗಿದೆ" ಎಂದ.

"ನೀನು ಹೇಳುವವೇನೊ ಸರಿ. ನಿನ್ನ ತಂದೆಯವರ ರೀತಿ ನೀತಿಯೇ ಬೇರೆ. ಅವರ ಮನಸ್ಸಿಗೆ ಬಂದದ್ದೇ ಆಗಬೇಕು. ಹಟ ಸಾಧಿಗಳು ಅವರು. ಎರಡನೆಯವರ ಮಾತಿನ ಕಡೆ ಗಮನವನ್ನೇ ಕೊಡುವದಿಲ್ಲ. ಏನು ಮಾಡಬೇಕು ಹೇಳು."

ಶೇಖರ ಮನಸ್ಸಿನಲ್ಲಿ ಏನೇನೋ ಯೋಚಿಸುತ್ತಿದ್ದ. ಹೆಚ್ಚಿಗೆ ಮಾತನಾಡದೆ ಅಲ್ಲಿಂದ ಎದ್ದು ಹೊರಟುಹೋದ.

ಈವಾಗ ಪರಸ್ಥಳದಲ್ಲಿ ಹೆಚ್ಚು ಸಮಯವಿರಲು ಶೇಖರನ ಮನಸ್ಸು ಒಪ್ಪಲೊಲ್ಲದು. ಅನ್ಯಮನಸ್ಕನಾಗಿ, ಉತ್ಸಾಹಹೀನನಾಗಿ ಅತ್ತಿಂದ ಇತ್ತ, ಇತ್ತಿಂದ ಅತ್ತ ಕೆಲವು ದಿನ ಅಲೆದಾಡಿದ. ಆದರೂ ಮನಸ್ಸಿಗೆ ಸಂತೋಷ ವುಂಟಾಗಲಿಲ್ಲ. ಒಂದು ದಿನ ಸಾಯಂಕಾಲ ಬೇಗನೇ ಮನೆಗೆ ಬಂದು "ಅಮ್ಮ, ಬಹಳ ಬೇಜಾರ ಬಂತು. ನಡೆಯಮ್ಮಾ, ಮನೆಗೆ

ಹೋಗೋಣ" ಎಂದ.

"ಹೌದು ಮಗೂ, ನನಗೂ ಇಲ್ಲಿ ಬೇಜಾರ ಬರಲಾರಂಭಿಸಿದೆ. ನಡೆ, ಊರಿಗೆ ಹೋಗೋಣ" ಎಂದರು ಭುವನೇಶ್ವರಿದೇವಿಯವರೂ.

ತಾಯಿ ಮಗ ಇಬ್ಬರೂ ಮನೆಗೆ ಬಂದು ಮಾಳಿಗೆಯ ಮೇಲಿನ ಮಾರ್ಗ ಮುಚ್ಚಿರುವದನ್ನು ನೋಡಿದರು. ಇನ್ನು ಗುರುಚರಣರ ಮನೆಯವರೊಂದಿಗೆ ಸಂಬಂಧವನ್ನಿಡುವದು, ಮಾತನಾಡುವದು ಅತ್ಯಂತ ಅಸಂಭವವೆಂದು ಅರಿತುಕೊಂಡರು.

ರಾತ್ರಿ ಊಟಕ್ಕೆ ಕುಳಿತಾಗ ಶೇಖರನ ಹತ್ತಿರವಲ್ಲಿಯೇ ಭುವನೇಶ್ವರಿ ದೇವಿಯವರು ಕುಳಿತಿದ್ದರು. ಅತ್ತ ಇತ್ತ ಕಡೆಯ ಒಂದೆರಡು ನುಡಿಗಳು ಮುಗಿದ ಬಳಿಕ "ಆ ಮನೆಯ ಗಿರೀಂದ್ರನೊಡನೆ ಲಲಿತೆಯ ಮದಿವೆಯ ಮಾತು ನಡೆಯುತ್ತಲಿದೆ. ಇದು ನನಗೆ ಮೊದಲೇ ತಿಳಿದಿತ್ತು" ಎಂದರು.

"ಯಾರು ಮಾತನಾಡುತ್ತಿದ್ದರು? ನಿನಗಾರು ಹೇಳಿದರು?"

"ನಾನು ಮಧ್ಯಾನ್ಹ ಊಟಮಾಡಿ ಅವರು ಮಲಗಿಕೊಂಡ ಮೇಲೆ ಲಲಿತೆಯ ಅತ್ತೆಯನ್ನು ಕಂಡು ಮಾತನಾಡಿ ಬಂದೆ. ಲಲಿತೆಯ ಅತ್ತೆಯೇ ಹೀಗೆ ಹೇಳಿದಳು. ಪಾಪ. ಅತ್ತು ಅತ್ತು ಅವರ ಕಣ್ಣುಗಳು ಊದಿಕೊಂಡಿವೆ" ಎಂದು ಭುವನೇಶ್ವರಿಯವರು ಕಣ್ಣೊರಿಸಿಕೊಳ್ಳುತ್ತ "ಎಲ್ಲವೂ ದೈವದ ಆಟ ಶೇಖರ! ಭಾಗ್ಯದಲ್ಲಿ ಬರೆದುದನ್ನು ಯಾರೂ ಅಳಿಸಲಾರರು. ದೋಷವನ್ನಾರಿಗೆ ಕೊಡಬೇಕು ಹೇಳು? ಗಿರೀಂದ್ರನೂ ಒಳ್ಳೆಯ ಹುಡುಗ. ಆಸ್ತಿಯೂ ಸಾಕಷ್ಟಾಗಿದೆ. ಹುಡುಗಿಗೆ ಏನೂ ತೊಂದರೆಯಾಗುವುದಿಲ್ಲ" ಎಂದರು.

ಶೇಖರನು ಮಾತನಾಡಲಿಲ್ಲ. ಮುಖವನ್ನು ತಗ್ಗಿಸಿಕೊಂಡು ಊಟದ ಪದಾರ್ಥಗಳನ್ನು ತಟ್ಟೆಯಲ್ಲಿ ಎತ್ತೆತ್ತಿ ಇಡುತ್ತಿದ್ದ. ಊಟವೇ ಅವನಿಗೆ ರುಚಿಸಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಭುವನೇಶ್ವರಿಯವರು ಎದ್ದು ಹೋದರು. ಅವನೂ ಊಟವನ್ನು ಬಿಟ್ಟು ಕೈಬಾಯಿ ತೊಳೆದುಕೊಂಡು ರೂಮಿಗೆ ಬಂದು ಮಲಗಿಕೊಂಡ.

ಮರುದಿನ ಸಾಯಂಕಾಲ ವಾಯುವಿಹಾರಕ್ಕೆ ದೂರ ಹೋಗಿ ಬರ ಬೇಕೆಂದು ಮನೆಯನ್ನು ಬಿಟ್ಟ. ಯಥಾಪ್ರಕಾರ ಮೊದಲಿನಂತೆ ಗುರುಚರಣರ ಪಡಸಾಲೆಯಲ್ಲಿ ಟೀ-ಪಾರ್ಟಿ ನಡೆದಿತ್ತು. ತಮಾಷೆ—ಗಟ್ಟಿಗಟ್ಟಿಯಾಗಿ ಮಾತುಕಥೆ ನಡೆಗಿತ್ತು. ಶೇಖರನು ಅವರ ಮನೆಯಲ್ಲಿ ಹೊಕ್ಕ. ಎಲ್ಲರೂ ಕುಳಿತಲ್ಲಿಗೆ ಹೋಗಿ ನಿಂತುಕೊಂಡ. ಕೂಡಲೇ ಗೌಜು ಶಾಂತವಾಯಿತು. ತಮಾಷೆ ನಿಂತು ಹೋಯಿತು. ಶೇಖರನನ್ನು ನೋಡುತ್ತಲೇ ಸರ್ವರ ಮುಖಭಾವಗಳಲ್ಲಿ ಪರಿವರ್ತನೆಯುಂಟಾಯಿತು.

ಶೇಖರನು ಪ್ರವಾಸದಿಂದ ಹಿಂತಿರುಗಿದ ಸಮಾಚಾರ ಲಲಿತೆಯೊಬ್ಬಳಿಗೆ ಮಾತ್ರ ಗೊತ್ತಿತ್ತು. ಉಳಿದವರಿಗೆ ಯಾರಿಗೂ ಗೊತ್ತಿರಲಿಲ್ಲ. ಇವತ್ತು ಗುರುಚರಣರ ಮನೆಯಲ್ಲಿ ಗಿರೀಂದ್ರನಲ್ಲದೆ ಇನ್ನೂ ಒಬ್ಬ ಮಹನೀಯರು ಕುಳಿತುಕೊಂಡಿದ್ದರು. ಅವರು ವಿಸ್ಮಯದಿಂದ ಶೇಖರನನ್ನೇ ನೋಡತೊಡಗಿದರು. ಗಿರೀಂದ್ರ ಗೋಡೆಯ ಕಡೆಗೆ ನೋಡಲಾರಂಭಿಸಿದ. ಗುರುಚರಣರು ಶೇಖರನನ್ನು ನೋಡುತ್ತಲೇ ನಿಸ್ತೇಜರಾದರು. ಅವರ ಸಮೀಪದಲ್ಲಿ ಕುಳಿತುಕೊಂಡು ಲಲಿತೆ ಟೀ ಮಾಡುತ್ತಿದ್ದಳು. ಒಂದು ಸಲ ತಲೆಯೆತ್ತಿ ಶೇಖರನನ್ನು ನೋಡಿ ಪುನಃ ತಲೆಬಾಗಿಸಿಕೊಂಡು ಕುಳಿತಳು.

ಗುರುಚರಣರ ಸಮೀಪಕ್ಕೆ ಹೋಗಿ ಅವರಿಗೆ ವಂದನೆಮಾಡಿ ಬಳಿಯಲ್ಲಿಯೇ ಕುಳಿತು ನಗುತ್ತ "ಒಮ್ಮೆಲೆ ಶಾಂತವಾಯಿತಲ್ಲ!" ಎಂದ ಶೇಖರ.

ಗುರುಚರಣರು ಅತಿ ಕ್ಷೀಣವಾದ ದನಿಯಲ್ಲಿ ಆಶೀರ್ವಾದವನ್ನಿತ್ತರು. ಏನೆನ್ನುವದು ಆರಿಗೂ ಗೊತ್ತಾಗಲಿಲ್ಲ.

ಗುರುಚರಣರ ಭಾವ ಶೇಖರನಿಗೆ ವಿದಿತವಾಯಿತು. ಆದುದರಿಂದ ಅವರಿಗೆ ಸ್ವಲ್ಪ ಸಮಯವನ್ನು ಕೊಡಬೇಕೆಂದು ಬಗೆದು ತಾನೇ ಮಾತಿಗೆ ಮೊದಲು ಮಾಡಿದ. ನಿನ್ನೆ ಬೆಳಿಗ್ಗೆ ತಾಯಿಯನ್ನು ಕರೆದುಕೊಂಡು ಬಂದೆನೆಂಬುದನ್ನೂ ಅವರ ಆರೋಗ್ಯ ಸುಧಾರಿಸಿದ ಸುದ್ದಿ-ಪ್ರಯಾಗದ ಇನ್ನೂ ಅನೇಕ ಸುದ್ದಿಗಳನ್ನೂ ಹೇಳುತ್ತ ಸಾಗಿದ. ಕೊನೆಯಲ್ಲಿ ಅವನ

ದೃಷ್ಟಿ ಅಪರಿಚಿತ ಯುವಕನ ಮೇಲೆ ಬಿದ್ದಿತು.

ಗುರುಚರಣರು ಚೇತರಿಸಿಕೊಂಡೆದ್ದು ಆ ಹುಡುಗನ ಪರಿಚಯ ಮಾಡಿಕೊಟ್ಟರು "ಇವರು ಗಿರೀಂದ್ರನ ಗೆಳೆಯರು. ಒಂದೇ ಊರಿನವರು. ಒಂದೇಕಡೆ ಇದ್ದುಕೊಂಡು ಒಂದೇ ಸ್ಕೂಲಿನಲ್ಲಿ ಓದಿದವರು. ಈವಾಗ ಶ್ಯಾಮಬಾಜಾರಿನಲ್ಲಿದ್ದಾರೆ. ಗಿರೀಂದ್ರನ ಪರಿಚಯವಾದಂದಿನಿಂದ ಅವರೂ ಇಲ್ಲಿಗೆ ಆಗಾಗ್ಗೆ ಬರುತ್ತಾರೆ.

ಶೇಖರ ಮನಸಲ್ಲಿಯೇ "ಒಳ್ಳೆಯ ಹುಡುಗ!" ಎಂದುಕೊಂಡು ಸ್ವಲ್ಪಹೊತ್ತು ಬಿಟ್ಟು "ಚಿಕ್ಕಪ್ಪನವರೇ ಬಾಕೀ ಎಲ್ಲವೂ ಕುಶಲವಷ್ಟೇ?" ಎಂದ.

ಗುರುಚರಣರು ತಲೆಬಾಗಿಸಿಕೊಂಡು ಕುಳಿತರು. ಮಾತನಾಡಲಿಲ್ಲ. ಶೇಖರ ಹೊರಡಲು ಸಿದ್ಧನಾದುದನ್ನು ನೋಡಿ ಗದ್ಗದಕಂಠದಿಂದ "ಆಗಾಗ್ಗೆ ಬರುತ್ತಿರು ತಮ್ಮಾ. ಬಿಟ್ಟೇ ಬಿಡಬೇಡ. ಎಲ್ಲ ಸಮಾಚಾರವನ್ನು ಕೇಳಿರುವಿಯಲ್ಲವೆ?" ಎಂದರು.

"ಹೌದು ಕೇಳಿದ್ದೇನೆ" ಎಂದು ಮನೆಯ ಒಳಕ್ಕೆ ಸ್ತ್ರೀಯರಿದ್ದ ಕಡೆ ಹೋದ.

ಗುರುಚರಣರ ಹೆಂಡತಿಯ ರೋದನ ಧ್ವನಿಯು ಕೇಳಬಂತು ಒಳಗಿನಿಂದ. ಹೊರಗೆ ಕುಳಿತುಕೊಂಡೇ ತಮ್ಮ ಪಂಚೆಯ ಚುಂಗಿನಿಂದ ಕಣ್ಣು ಒರೆಸಿಕೊಂಡರು. ಗಿರೀಂದ್ರ ಅಪರಾಧಿಯಂತೆ ಕುಳಿತುಕೊಂಡು ಕಿಡಿಕಿಯ ಹೊರಗೆ ನೋಡುತಲಿದ್ದ. ಲಲಿತಾ ಮೊದಲೇ ಎದ್ದು ಒಳಕ್ಕೆ ಹೋಗಿದ್ದಳು.

ಶೇಖರ ಅಡಿಗೆಯ ಮನೆಯನ್ನು ದಾಟಿ ಹಿತ್ತಲ ಬಳಿ ಹೋದ. ಅಲ್ಲಿಯೆ ಒಂದು ಬಾಗಿಲ ಮರೆಯಲ್ಲಿ ಲಲಿತೆ ನಿಂತಿದ್ದಳು. ಶೇಖರನು ಬಂದೊಡನೆಯೆ ಅವನ ಅತ್ಯಂತ ಸಮೀಪಕ್ಕೆ ಹೋಗಿ ವಕ್ಷಃಸ್ಥಲದ ಮೇಲೆ ಮಸ್ತಕವನ್ನಿಟ್ಟು, ಸ್ವಲ್ಪ ಹೊತ್ತು ತಡೆದು ಮುಖವನ್ನು ಮೇಲಕ್ಕೆತ್ತಿ ಏನೋ ಮೂಕಭಾವದಿಂದ ಬೇಡುತ್ತ ನಿಂತಳು. ಆ ಮೇಲೆ ಸ್ವಲ್ಪ ಹಿಂದಕ್ಕೆ ಸರಿದು "ನನ್ನ ಪತ್ರಕ್ಕೆ ಉತ್ತರವನ್ನೇಕೆ ಕೊಡಲಿಲ್ಲ?"

ಎಂದು ಕೇಳಿದಳು.

"ನನಗೆ ಯಾವ ಪತ್ರವೂ ಸಿಕ್ಕಲಿಲ್ಲ. ಬರೆದಿದ್ದೆಯೇನು ?"

" ಎಷ್ಟೋ ವಿಷಯಗಳಿದ್ದವು ಅದರಲ್ಲಿ. ಅದು ಹೋಗಲಿ ಬಿಡಿ. ಎಲ್ಲ ಇಲ್ಲಿನ ಸಮಾಚಾರವೂ ನಿಮಗೆ ಗೊತ್ತಾಗಿದೆ. ಈವಾಗ ನಾನೇನು ಮಾಡಬೇಕು? ಹೇಳಿ."

ಶೇಖರ ಆಶ್ಚರ್ಯದಿಂದ "ನನ್ನನ್ನೇಕೆ ಕೇಳುತ್ತೀ? ನನ್ನ ಆಜ್ಞೆ ನಿನಗೇಕೆ? ನನ್ನ ಆಜ್ಞೆಯಿಂದ ನಿನಗೇನಾಗಬೇಕಾಗಿದೆ?" ಎಂದ.

ಶೇಖರನನ್ನು ಒಂದೇ ದೃಷ್ಟಿಯಿಂದ ನೋಡುತ್ತ ಸಂಶಯದಿಂದ ಕೇಳಿದಳು "ಏತಕ್ಕೆಂದು ಕೇಳುತ್ತೀರೋ ?"

"ಹೌದು. ನಾನಾರಿಗೆ ಆಜ್ಞೆಯನ್ನೀಯಲಿ?"

" ನನಗೆ ಕೊಡಿ. ಮತ್ತಾರಿಗೆ ಕೊಡುವಿರಿ ? "

" ನಿನಗೇಕೆ ಆಜ್ಞೆಯನ್ನು ಕೊಡಬೇಕು ನಾನು? ಕೊಟ್ಟರೂ ನೀನು ಅದನ್ನು ಮನ್ನಿಸುವೆಯೇನು? " ಶೇಖರನ ಈ ಮಾತಿನಲ್ಲಿ ಗಾಂಭೀರ್ಯ, ಕರುಣೆ ತುಂಬಿತ್ತು.

ಲಲಿತೆಗೆ ಭಯವಾಯಿತು. ಪುನಃ ಶೇಖರನ ಸಮೀಪಕ್ಕೆ ಹೋಗಿ ಗದ್ಗದ ಕಂಠದಿಂದ "ಸಾಕು, ಹೋಗಿಂದ್ರೆ. ಈವಾಗ ಹೆಚ್ಚಿಗೆ ತಮಾಷೆ ಮಾಡಬೇಡಿ. ದಮ್ಮಯ್ಯ ಎನ್ನುತ್ತೇನೆ. ನಿಮ್ಮ ಪಾದಕ್ಕೆರಗುತ್ತೇನೆ. ಹೇಳಿ ನಾನೇನು ಮಾಡಲಿ ? ರಾತ್ರಿ ಸರಿಯಾಗಿ ಈ ಚಿಂತೆಯಲ್ಲಿ ನಿದ್ರೆ ಕೂಡ ಬರುವದಿಲ್ಲ. ಅಂಜಿಕೆಯಾಗುತ್ತೆ " ಎಂದಳು.

" ಅಂಜಿಕೆ ಎಂತಹದು ? "

"ಒಳ್ಳೇ ಪ್ರಶ್ನೆ ನಿಮ್ಮದೂ. ನೀವು ಹತ್ತಿರದಲ್ಲಿಲ್ಲ. ತಾಯಿಯವರೂ ದೂರ ಹೋಗಿ ಕುಳಿತುಬಿಟ್ಟರು. ಮಾವನವರು ಹೀಗೆ ಮಾಡುತ್ತಾರೆ. ಅಂಜಿಕೆ ಬರದೆ ಏನು ಮಾಡೀತು ? ಈವಾಗ ಅಮ್ಮನವರು ತಮ್ಮ ಮನೆಯಲ್ಲಿ ನನಗೆ ಆಶ್ರಯವನ್ನೀಯದಿದ್ದರೆ ? " ಎಂದಳು.

ಶೇಖರ ಕ್ಷಣಕಾಲ ಸುಮ್ಮನಿದ್ದು "ಹೌದು, ಅಮ್ಮ ನಿನ್ನನ್ನು ಮನೆಯಲ್ಲಿ ಇಟ್ಟುಕೊಳ್ಳಲು ಇಚ್ಛಿಸಲಿಕ್ಕಿಲ್ಲ. ಮೇಲಾಗಿ ನಿನ್ನ ಮಾವ

ಅನ್ಯರಿಂದ ಅಗಣಿತ ಹಣವನ್ನು ತೆಗೆದುಕೊಂಡಿರುವದು ಅವರಿಗೆ ಗೊತ್ತಾಗಿದೆ. ಈವಾಗ ನೀವು ಬ್ರಹ್ಮಸಮಾಜದವರು, ನಾವು ಹಿಂದೂ ಸಮಾಜದವರು" ಎಂದ.

ಅಡಿಗೆಮನೆಯಿಂದ ಅನ್ನಾಕಾಳಿ ಕೂಗಿದಳು—"ಲಲಿತಕ್ಕ," ಅಮ್ಮ ನಿನ್ನನ್ನು ಕರೆಯುತ್ತಿದ್ದಾಳೆ."

"ಬರುತ್ತೇನೆ" ಎಂದು ಕೂಗಿ ಹೇಳಿ ಪುನಃ ಮೆಲ್ಲನೆ ಹೇಳಿದಳು "ಮಾವನವರು ಬ್ರಹ್ಮಸಮಾಜಕ್ಕೆ ಸೇರಿದರೂ ನಾನು ಸೇರಿಲ್ಲ. ನೀವು ಆವ ಸಮಾಜದವರೋ ನಾನೂ ಅದೇ ಹಿಂದೂ ಸಮಾಜದವಳು. ನಿಮ್ಮ ಸಮಾಜವು ನಿಮ್ಮನ್ನು ತನ್ನಿಂದ ಬೇರೆ ಇಡದೆ ಹೋದರೆ ನನ್ನನ್ನೂ ಇಡಲಾರದು. ಗಿರೀಂದ್ರ ಬಾಬೂಗಳಿಂದ ಹಣ ತೆಗೆದುಕೊಂಡ ಮಾತು. ನಾನು ಅವರ ಹಣವನ್ನೆಲ್ಲ ಹಿಂತಿರುಗಿ ಕೊಟ್ಟುಬಿಡುತ್ತೇನೆ. ಸಾಲ ತೆಗೆದುಕೊಂಡ ಮೇಲೆ ಒಂದು ದಿನ ಮುಂಚೆಯಾಗಲಿ ಅಥವಾ ತಡವಾಗಲಿ ಅದನ್ನು ತೀರಿಸಲೇಬೇಕು."

"ಅಷ್ಟು ರೂಪಾಯಿ ನಿನಗೆ ಎಲ್ಲಿಂದ ದೊರಕುವವು?"

ಸ್ವಲ್ಪ ಸಮಯ ಸುಮ್ಮನಿದ್ದು ಶೇಖರನ ಕಡೆ ನೋಡಿ "ಸ್ತ್ರೀಯರಿಗೆ ರೂಪಾಯಿಗಳು ಎಲ್ಲಿಂದ ಸಿಕ್ಕುತ್ತವೆ, ನಿಮಗೆ ಗೊತ್ತಿಲ್ಲವೆ? ನನಗೂ ಅಲ್ಲಿಂದಲೇ ಸಿಕ್ಕುವವು" ಎಂದಳು.

ಸಂಯಮದಿಂದ ಇಲ್ಲಿಯವರೆಗೆ ಮಾತನಾಡುತ್ತಿದ್ದ ಶೇಖರ. ಆದರೆ ಒಳಗೇ ಕುದಿಯುತ್ತಿದ್ದ. ಈವಾಗ ಆ ಕುದಿಯು ಹೊರಬಿತ್ತು. ಆವೇಶದಿಂದ "ನಿನ್ನನ್ನು ನಿನ್ನ ಮಾವ ಮಾರಿಬಿಟ್ಟಿರುವನಲ್ಲ?" ಎಂದ.

ಕತ್ತಲಾಗಿದ್ದರಿಂದ ಮುಖದ ಭಾವವು ಗೊತ್ತಾಗದಿದ್ದರೂ ಅವನ ದನಿಯಿಂದ ಅವನ ಭಾವನೆಯನ್ನು ಗುರುತಿಸಿದಳು. ಅತ್ಯಂತ ಗಂಭೀರ ಭಾವದಿಂದ, ದೃಢತೆಯಿಂದ "ಇದು ಸುಳ್ಳು. ನನ್ನ ಮಾವನಂತಹ ದೇವತಾಪುರುಷರು ಈ ಜಗತ್ತಿನಲ್ಲಿ ಸಿಕ್ಕುವದು ವಿರಳ. ಅವರನ್ನು ಈ ರೀತಿಯಾಗಿ ಜರೆಯಬೇಡಿ. ಅವರ ದುಃಖದ ಆಳವು ನಿಮಗೆ ಗೊತ್ತಿಲ್ಲದಿರಬಹುದು. ಜಗತ್ತಿಗೆ ಮಾತ್ರ ಗೊತ್ತಿದೆ" ಎಂದು ಸ್ವಲ್ಪ ಹೊತ್ತು

ತಡೆದು ಮತ್ತೆ "ನನ್ನ ಮದುವೆಯ ಮಾತು ನಡೆಯುವ ಮೊದಲೇ ರೂಪಾಯಿಗಳನ್ನು ತೆಗೆದುಕೊಂಡಿದ್ದಾರೆ. ನನ್ನನ್ನು ಮಾರುವ ಅಧಿಕಾರ ಅವರಿಗಿಲ್ಲ. ಅವರು ನನ್ನನ್ನು ಮಾರಲೂ ಇಲ್ಲ. ಈ ಜಗತ್ತಿನಲ್ಲಿ ನನ್ನನ್ನು ಮಾರುವ ಅಧಿಕಾರ ಯಾರಿಗಾದರೂ ಇದ್ದರೆ ಅದು ನಿಮಗೆ ಮಾತ್ರ ಇದೆ. ಮತ್ತಾರಿಗೂ ಇಲ್ಲ. ರೂಪಾಯಿಗಳನ್ನು ಕೊಡಬೇಕಾಗುವ ಭಯದಿಂದ ನೀವು ನನ್ನನ್ನು ಮಾರಲು ಬಯಸಿದರೆ ಅವಶ್ಯವಾಗಿ ಮಾರಿಬಿಡಿ" ಎಂದವಳೇ ಶೇಖರನ ಉತ್ತರದ ದಾರಿ ನೋಡದೆ ಅತಿ ವೇಗದಿಂದ ಅಡಿಗೆಯ ಮನೆಯ ಕಡೆಗೆ ಹೋಗಿಬಿಟ್ಟಳು.

೯

ಶೇಖರ ಅತ್ಯಂತ ವಿಹ್ವಲನಾದ. ಅವನ ಹೃದಯದಲ್ಲಿ ಬಿರುಗಾಳಿ ಬೀಸಲಾರಂಭಿಸಿತು. ರಾತ್ರಿ ಬಹಳ ಸಮಯದ ವರೆಗೆ ಬೀದಿ ಬೀದಿ ಅಲೆದಾಡಿ ಮನೆಗೆ ಬಂದ. ಊಟಮಾಡಲಿಲ್ಲ. ಫಲಾಹಾರ ಮಾಡಲಿಲ್ಲ. ರೂಮಿನಲ್ಲಿ ಕುಳಿತು ಯೋಚನಾ-ಸಾಗರದಲ್ಲಿ ಮುಳುಗಿದ. ನಿನ್ನೆಯವರೆಗೆ ಇಷ್ಟು ಚಿಕ್ಕ ಇದ್ದ ಹುಡುಗಿ ಲಲಿತೆ ಇಂದು ಇಷ್ಟು ಹುಷಾರಿಯಾದಳೆ! ಇಷ್ಟು ಇಂತಹ ಮಾತುಗಳನ್ನು ಕಲಿತುಕೊಂಡಳೆ! ನಿರ್ಲಜ್ಜ, ವಾಚಾಳ ಹೆಂಗಸರಂತೆ ನನ್ನೆದುರಿಗೆ ನಿಂತು ಇಂತಹ ಮಾತುಗಳನ್ನಾಡುವ ಸಾಮರ್ಥ್ಯ ಅವಳಿಗೆ ಬಂತೆ!

ಲಲಿತೆಯ ವ್ಯವಹಾರದಿಂದ ಅವನಿಗೆ ವಿಸ್ಮಯ; ಕೋಪ. ಚೆನ್ನಾಗಿ ವಿಚಾರಿಸಿ ನೋಡಿದಾಗೆಲ್ಲ ಲಲಿತೆಯು ಕೋಪಕ್ಕೆ ಪಾತ್ರಳಲ್ಲ, ತಾನೇ ಎಂದು ಎನಿಸುತ್ತಿತ್ತು ಅವನಿಗೆ.

ಲಲಿತೆಯನ್ನು ಬಿಟ್ಟು ಎರಡು ಮೂರು ತಿಂಗಳು ಅವನು ಪ್ರವಾಸದಲ್ಲಿದ್ದರೂ ಅವಳೊಡನೆ ಕಲ್ಪನಾರಾಜ್ಯದಲ್ಲಿ ವಿಹರಿಸುತ್ತಿದ್ದ. ಅವಳ ವಿಷಯವಾಗಿ ಯೋಚಿಸುತ್ತಿದ್ದ. ಕೇವಲ ಕಾಲ್ಪನಿಕ ದುಃಖಹಾನಿಯ ಲೆಕ್ಕವನ್ನೇ ಮಾಡಿ ನೋಡುತ್ತಿದ್ದ— ತನ್ನ ಭಾವೀ ಜೀವನದೊಂದಿಗೆ ಲಲಿತೆಯ ಸಂಬಂಧವು ಎಷ್ಟು ಇದೆ? ಅವಳನ್ನು ಬಿಟ್ಟರೆ ತನ್ನ ಜೀವನವು ಎಷ್ಟು ದುಃಖಮಯವಾಗುವದು? ಚಿಕ್ಕಂದಿನಿಂದಲೇ ಲಲಿತೆಯು

ತನ್ನ ಪರಿವಾರದಲ್ಲಿ ಸೇರಿಕೊಂಡರೂ ತಾನು ಅವಳನ್ನು ಒಂದು ದಿನವೂ ಬಂಧುಬ್ಬಳಗದವರಂತೆ ವಿಶೇಷ ಮಮತೆಯಿಂದ ನೋಡಲಿಲ್ಲ. ಈ ಬಗೆಯಾಗಿ ಅವಳನ್ನು ನೋಡಬೇಕೆನ್ನುವ ವಿಚಾರವೂ ತನಗೆ ಬರಲಿಲ್ಲ; ಲಲಿತೆಯೊಡನೆ ಮದಿವೆಯಾಗಲು ತನ್ನ ತಂದೆತಾಯಂದಿರು ಒಪ್ಪಲಿಕ್ಕಿಲ್ಲ. ಅವಳು ತನಗೆ ದೊರೆಯದೆ ಹೆರಪರವಳು ಆಗಬಹುದು. ಇದೇ ತೆರನಾದ ವಿಚಾರಧಾರೆಯಲ್ಲಿ ಹರಿದುಹೋಗುತ್ತಿದ್ದ. ಅಂತೆಯೆ ಅವನು ಯಾತ್ರೆಗೆ ಹೊರಡುವ ಮುನ್ನಾದಿನ ರಾತ್ರಿ ಚಂದ್ರತಾರೆಗಳ ಸಾಕ್ಷಿಯಾಗಿ ಲಲಿತೆಯ ಕೊರಳಲ್ಲಿ ಬಲಾತ್ಕಾರದಿಂದ ಹಾರವನ್ನು ಹಾಕಿ ( ಅನ್ಯರೊಡನೆ ಮದಿವೆಯಾಗುವ ) ಮಾರ್ಗವನ್ನು ಮುಚ್ಚಿಹೋಗಿದ್ದ.

ಪ್ರವಾಸದಲ್ಲಿದ್ದಾಗ ಗುರುಚರಣರ ಧರ್ಮಪರಿವರ್ತನೆಯ ಸುದ್ದಿಯನ್ನು ಕೇಳಿ ಅವನಿಗೆ ದುಃಖವಾಯಿತು. ಲಲಿತೆಯು ತನ್ನ ಕೈಯಿಂದ ಪಾರಾಗಿ ಹೋಗಬಾರದು, ಅವಳಿಂದ ತನಗೆ ಸುಖವೇ ಸಿಕ್ಕಲಿ ಅಥವಾ ದುಃಖವೇ ದೊರೆಯಲಿ. ಹಗಲೂರಾತ್ರಿ ಇದೊಂದೇ ಚಿಂತೆ ಅವನಿಗೆ. ಲಲಿತೆಯ ವಿಚಾರವೇ ವಿಚಾರ ಅವನಿಗೆ. ಆದರೆ ಇಂದಿನ ಲಲಿತೆಯ ಸ್ಪಷ್ಟೋಕ್ತಿಗಳು ಈ ಪ್ರಕಾರದ ವಿಚಾರದ್ವಾರವನ್ನು ಒಮ್ಮೆಲೆ ಮುಚ್ಚಿಬಿಟ್ಟವು. ವಿಚಾರಧಾರೆಯು ವಿರುದ್ಧವಾಗಿ ಹರಿಯಲಾರಂಭಿಸಿತು. ಆವಾಗ ಲಲಿತೆಯು ದೊರೆಯುವಳೋ ಇಲ್ಲವೋ ಎಂಬ ಚಿಂತೆ ಇತ್ತು. ಈವಾಗ ಲಲಿತೆ ಸಿಕ್ಕುವದು ಅಸಂಭವವಾಗಬಾರದೆಂಬ ಚಿಂತೆ ಅವನನ್ನು ಮುತ್ತಿತು.

ಶ್ಯಾಮಬಾಜಾರದಲ್ಲಿ ಒಬ್ಬ ಶ್ರೀಮಂತರ ಮನೆಯಲ್ಲಿ ಶೇಖರನ ವಿವಾಹದ ಮಾತು ನಡೆಯುತ್ತಿತ್ತು. ಅದೂ ನಿಂತುಹೋಯಿತು. ನವೀನರಾಯರು ೧೦-೧೫ ಸಾವಿರ ವರದಕ್ಷಿಣೆ ಬೇಡುತ್ತಿದ್ದರು. ಇಷ್ಟು ವರದಕ್ಷಿಣೆ ಕೊಡಲಿಕ್ಕೆ ಅವರು ಸಿದ್ಧರಿದ್ದಿಲ್ಲ. ಇಷ್ಟಕ್ಕಿಂತ ಒಂದು ಕಾಸು ಕಡಿಮೆ ತೆಗೆದುಕೊಳ್ಳಲಿಕ್ಕೆ ನವೀನರಾಯರು ಸಿದ್ಧರಿದ್ದಿಲ್ಲ. ಮೇಲಾಗಿ ಶೇಖರನ ತಾಯಿಗೂ ಈ ಸಂಬಂಧ ಸರಿಬರದ್ದರಿಂದ ಮುರಿದು ಹೋಯಿತು. ಶೇಖರನ ಒಂದು ಚಿಂತೆಯು ದೂರಾಯಿತು.

ಇನ್ನು ಮುಂದೆ ಏನು ಮಾಡಬೇಕೆನ್ನುವದೇ ಶೇಖರನ ಸಮಸ್ಯೆ. ಅಂದಿನ ರಾತ್ರಿ ಸಂಭವಿಸಿದ ಸಂಗತಿ ಇಷ್ಟು ಬೆಳೆದು ದೊಡ್ಡದಾಗುವ ದೆಂದು ಅವನು ಬಗೆದಿರಲಿಲ್ಲ. ಲಲಿತೆಯು ನಿಜವಾಗಿಯೂ-ತನ್ನ ವಿವಾಹವು ಆಗಿದೆ, ತದ್ವಿರುದ್ಧ ನಡೆಯುವದು ಅಧರ್ಮವೆಂದು ನಂಬಿ ಕುಳಿತುಕೊಂಡರೆ ಏನು ಮಾಡಬೇಕು? ಈ ವಿಚಾರ ಅವನಿಗೆ ಆಗ ಬರಲಿಲ್ಲ; ಅಂತೆಯೇ ಅವನು ಏನಾಗಬೇಕಾಗಿತ್ತೋ ಅದು ಆಗಿ ಹೋಯಿತು; ನಮ್ಮಿಬ್ಬರ ಬಂಧನವನ್ನು ಇನ್ನು ಯಾರೂ ಮುರಿಯ ಲಾರರು ಎಂದು ಹಿಂದುಮುಂದೆ ವಿಚಾರ ಮಾಡದೆ ನುಡಿದುಬಿಟ್ಟ.

ಆಗ ಮುಗಿಲಲ್ಲಿ ಚಂದ್ರನು ಮೂಡಿದ್ದ. ಎಲ್ಲೆಡೆಗೂ ಆತನ ಶುಭ್ರಕೀರ್ತಿಯ ಬೆಳದಿಂಗಳು ಚಿನ್ನಾಟವಾಡುತ್ತಿತ್ತು. ಅವನ ಕೊರಳಿ ನಲ್ಲಿ ಹೂವಿನ ಹಾರವು ಬಿದ್ದಿತ್ತು. ಪ್ರಿಯತಮೆಯ ಹಾರುವ ಹೃದಯ ವನ್ನು ಎದೆಗಪ್ಪಿಕೊಂಡು ಅನುಭವಿಸಿದ ಮೊಟ್ಟಮೊದಲನೆಯ ಮೋಹ ವಿತ್ತು. ಪ್ರೇಮೀಜನರು ಅಧರ-ಸುಧೆಯೆಂದು ಕರೆಯುವ ಅಮೃತವನ್ನು ಪಾನಮಾಡುವ ಪ್ರಬಲವಾದ ಆಕಾಂಕ್ಷೆಯಿತ್ತು. ಆಗ ಸ್ವಾರ್ಥದ ಹಾಗೂ ಸಾಂಸಾರಿಕ ಒಳಿತು ಕೆಡಕುಗಳ, ಸುಖ-ದುಃಖಗಳ ಭಾವನೆಯಿರಲಿಲ್ಲ. ಅರ್ಥಲೋಲುಪ ತಂದೆಯ ರೌದ್ರಾವತಾರವು ದೃಷ್ಟಿಗೋಚರವಾಗಲಿಲ್ಲ. ತಾಯಿಯು ಲಲಿತೆಯನ್ನು ಬಹುವಾಗಿ ಪ್ರೀತಿಸುತ್ತಾಳೆ, ಆದುದರಿಂದ ತಾಯಿಯ ಒಪ್ಪಿಗೆಯನ್ನು ಪಡೆಯುವದು ಕಷ್ಟಸಾಧ್ಯವಾದುದಲ್ಲ. ಅಣ್ಣನ ಮುಖಾಂತರ ತಂದೆಯ ಒಪ್ಪಿಗೆಯನ್ನೂ ಪಡೆದುಕೊಳ್ಳಬಹುದು. ಸರ್ವವಿಧವಾಗಿಯೂ ಪ್ರಯತ್ನ ಮಾಡಿ ತನ್ನ ಕಾರ್ಯವನ್ನು ಸಾಧಿಸಿ ಕೊಳ್ಳಬಹುದು. ಸುಖದಿಂದ ಲಲಿತೆಯೊಡನೆ ಜೀವನವನ್ನು ವ್ಯತೀತ ಮಾಡಬಹುದೆಂದು ಯೋಚಿಸಿದ್ದ. ಆದರೆ ಈವಾಗ ಗುರುಚರಣರ ಆಚರಣೆಯಿಂದ ಅವನ ಸುಖಸಾಮ್ರಾಜ್ಯದ ದ್ವಾರವು ಮುಚ್ಚಿಹೋಯಿತು. ದುರ್ದೈವವೇ ತನ್ನ ಬೆನ್ನುಹತ್ತಿರುವಂತೆ ಅವನಿಗೆನಿಸಿತು.

ಶೇಖರನು ಒಂದು ನೀಳವಾದ ಉಸಿರನ್ನು ಬಿಟ್ಟು ಒಂದು ಸಲ ಅಸ್ಪಷ್ಟವಾಗಿ ನುಡಿದ "ಈವಾಗೇನು ಮಾಡಬೇಕು?"

ಲಲಿತೆಯನ್ನು ಅವನು ಚೆನ್ನಾಗಿ ಬಲ್ಲ. ಚಿಕ್ಕಂದಿನಿಂದ ಅವಳಿಗೆ ವಿದ್ಯಾಬುದ್ಧಿಯನ್ನು ಕಲಿಸಿ ದೊಡ್ಡವಳನ್ನಾಗಿ ಮಾಡಿದ್ದಾನೆ. ಅವಳು ಒಂದು ಸಲ ಧರ್ಮವೆಂದು ತಿಳಿದುಕೊಂಡದ್ದನ್ನು ಎಂದಿಗೂ ಬಿಡಳು. ತಾನು ಶೇಖರನ ಧರ್ಮಪತ್ನಿಯೆಂದು ತಿಳಿದುಕೊಂಡಿರುವಳು. ಆದುದರಿಂದಲೇ ಅವಳು ಇವತ್ತು ಸಾಯಂಕಾಲ, ಕತ್ತಲಲ್ಲಿ ಶೇಖರನ ಸಮೀಪಕ್ಕೆ ಹೋಗಿ ಅವನ ವಕ್ಷಸ್ಥಳದ ಮೇಲೆ ಒಂದು ಸಲ ತಲೆಯನ್ನು ಇಟ್ಟು ಪುನಃ ಅದನ್ನು ಮೇಲಕ್ಕೆತ್ತಿ ಏನೋ ಮೂಕಭಾವದಿಂದ ಬೇಡಿದಳು.

ಗಿರೀಂದ್ರನೊಡನೆ ಲಲಿತೆಯ ವಿವಾಹದ ಮಾತು ನಡೆದಿತ್ತು. ಆದರೂ ಅವಳು ಇದಕ್ಕೊಂದೂ ಒಪ್ಪಿಗೆಯನ್ನೀಯುವದಿಲ್ಲ. ಪ್ರಸಂಗ ಬಂದಾಗ ಇದ್ದ ಸಂಗತಿಯನ್ನು ಇದ್ದ ಹಾಗೆ ಪ್ರಕಟಗೊಳಿಸಲು ಹಿಂಜರಿಯುವದಿಲ್ಲ.

ಶೇಖರನ ಕಣ್ಣುಗಳು ಉರಿಯಲಾರಂಭಿಸಿದವು. ಮುಖವು ಕೆಂಪೇರಿತು. ಸಿಃ! ಅವನು ಮಾಲೆಯನ್ನಷ್ಟೇ ಹಿಂತಿರುಗಿ ಕೊಡಲಿಲ್ಲ. ಅವಳನ್ನು ಆಲಿಂಗಿಸಿ ಮನೋಹರವಾದ ಮುಖವನ್ನು ಮುದ್ದಿಟ್ಟಿದ್ದ! ಲಲಿತೆಯು ಬೇಡವೆನಲಿಲ್ಲ—ದೋಷವಲ್ಲವೆಂದು, ಶೇಖರನಿಗೆ ಮುದ್ದಿಡುವ ಅಧಿಕಾರವುಂಟೆಂದು ತಿಳಿದೇ ಅವಳು ತಡೆಯನ್ನುಂಟುಮಾಡಲಿಲ್ಲ. ಈವಾಗ ಇವೆಲ್ಲ ಕಾರ್ಯಗಳ ಕೈಫಿಯತ್ತನ್ನು ಅವನು ಕೊಡುವನೋ?

ತಂದೆತಾಯಂದಿರ ಅಪ್ಪಣೆ ಪಡೆದುಕೊಳ್ಳದೆ ಲಲಿತೆಯೊಡನೆ ಶೇಖರನು ಮದುವೆಯಾಗಲಾರ. ಆದರೆ ಗಿರೀಂದ್ರನೊಡನೆ ಲಲಿತೆಯ ಮದುವೆಯು ಆಗದು ಎನ್ನುವದರ ಕಾರಣವು ಪ್ರಕಟವಾದರೆ ಮನೆಯಲ್ಲಿ ಮತ್ತು ಹೊರಗೆ ತನ್ನ ಮುಖವನ್ನು ಹೇಗೆ ತೋರಿಸುವ?

## ೧೦

ಲಲಿತೆಯು ತನಗೆ ದೊರೆಯುವದು ತೀರ ಅಸಂಭವವೆಂದು ಗೊತ್ತಾದ ಮೇಲೆ ಅವನು ಅವಳ ಆಸೆಯನ್ನು ಬಿಟ್ಟಿದ್ದ. ಆದರೆ ಮೊದಮೊದಲು ಆಕಸ್ಮಾತ್ ಲಲಿತೆಯು ಬಂದು, ಹಿಂದೆ ಗೈದ ಕಾರ್ಯಗಳನ್ನು ಹೊರಗೆ ಹಾಕಿ ಕೈಫಿಯತ್ತು ಕೇಳಿದರೆ ತಾನು ಏನೆಂದು ಉತ್ತರ

ಕೊಡಬೇಕು? ಎನ್ನುವ ವಿಚಾರ ಬಂದೊಡನೆಯೇ ಅವನು ಭಯದಿಂದ ನಡುಗಲಾರಂಭಿಸುತ್ತಿದ್ದ. ಆದರೆ ಯಾರೂ ಅವನಿಂದ ಕೈಫಿಯತ್ತು ಬೇಡಲಿಲ್ಲ. ಯಾವುದಾದರೂ ಮಾತು ಹೊರಟಿತ್ತೋ ಅಥವಾ ಇಲ್ಲವೋ? ಎನ್ನುವುದೂ ಅವನಿಗೆ ಗೊತ್ತಾಗಲಿಲ್ಲ; ಮತ್ತು ಗುರುಚರಣನ ಮನೆಯಿಂದ ಇವನ ಮನೆಗೆ ಯಾರೂ ಬರಲಿಲ್ಲ. ಶೇಖರನ ಕೋಣೆಯ ಮುಂಭಾಗದಲ್ಲಿದ್ದ ತೆರೆದ ಮಾಳಿಗೆಯ ಮೇಲೆ ನಿಂತರೆ ಗುರುಚರಣನ ಮಾಳಿಗೆಯ ಮೇಲಿನದೆಲ್ಲ ಕಾಣುತ್ತಿತ್ತು. ಅಕಸ್ಮಾತ್ ಮಾಳಿಗೆಯ ಮೇಲೆ ಲಲಿತೆಯ ದರ್ಶನವು ಆಗಬಹುದೆಂದು ಕೆಲವು ದಿನ ಮಾಳಿಗೆಯ ಮೇಲೆ ಬಹಳ ಸಮಯದವರೆಗೆ ನಿಲ್ಲುತ್ತಲೇ ಇರಲಿಲ್ಲ. ಈ ಬಗೆಯ ವಿಘ್ನವು ಇಲ್ಲದೆ ಒಂದು ತಿಂಗಳು ಕಳೆದ ಮೇಲೆ ಶೇಖರನಿಗೆ ಸ್ವಲ್ಪ ಸಮಾಧಾನವಾಯಿತು. ಒಂದು ತಣ್ಣಗಿನ ಉಸಿರು ಬಿಟ್ಟು "ಏನೇ ಆಗಲಿ, ಮುಗಿಲು ಕಡಿದು ಬೀಳಲಿ, ಸ್ತ್ರೀಜಾತಿ ಲಜ್ಜೆಯನ್ನು ತ್ಯಜಿಸದು" ಎಂದ. ಸ್ತ್ರೀಯರು ಪ್ರಾಣ ಹೋದರೂ ತಮ್ಮ ಲಜ್ಜೆಯನ್ನು ಬಿಡರೆಂದು ಅವನು ಕೇಳಿದ್ದ. ಅದು ಈವಾಗ ಸತ್ಯವೆಂದು ಅವನ ಅನುಭವಕ್ಕೆ ಬಂತು. ಸ್ತ್ರೀಯರಲ್ಲಿ ಇದೊಂದು ದುರ್ಬಲತೆಯನ್ನಿಟ್ಟಿದ್ದಕ್ಕಾಗಿ ಅವನು ಪರಮಾತ್ಮನನ್ನು ವಂದಿಸಿದ. ಅವನು ನಿರಾಶೆಯಿಂದ ನಿಶ್ಚಿಂತನಾಗಿದ್ದರೂ ಅವನಿಗೆ ಶಾಂತಿಯಿರಲಿಲ್ಲ. ಯಾವ ತರದ ಭಯವೂ ಇಲ್ಲವೆಂದು ಗೊತ್ತಾದರೂ ಆಗಾಗ್ಗೆ ಅವನ ಅಂತಃಕರಣದ ಅಂತರಾಳದಲ್ಲಿ ಒಂದು ವ್ಯಥೆಯು ಏಳುತ್ತಿದೆ. ಇದು ಏಕೆ? ಲಲಿತೆಯು ಯಾವ ಮಾತನ್ನೂ ಪ್ರಕಟಮಾಡಲಿಕ್ಕಿಲ್ಲವೆ? ತನ್ನನ್ನು ಒಬ್ಬರ ಕೈಗೆ ಕೊಡುವತನಕ ಹೀಗೆಯೆ ಸುಮ್ಮನಿರುವಳೇ? ಲಲಿತೆಯ ಮದುವೆಯಾಗಿದೆ, ಅವಳು ಅತ್ತೆಯ ಮನೆಯಲ್ಲಿ ಸುಖವಾಗಿದ್ದಾಳೆನ್ನುವ ವಿಚಾರ ಮನದಲ್ಲಿ ಬರುತ್ತಲೇ ಅವನಿಗೆ ಅತ್ಯಂತ ವ್ಯಥೆ ಏಕೆ ಆಗುತ್ತಿದೆ?

ದಿನಾಲು ಸಾಯಂಕಾಲ ತಿರುಗಾಡಲು ಹೋಗುವ ಅಭ್ಯಾಸವಿದ್ದಿಲ್ಲ ಶೇಖರನಿಗೆ; ತನ್ನ ರೂಮಿನ ಎದುರಿನಲ್ಲಿಯೇ ತಿರುಗಾಡುತ್ತಿದ್ದ. ಇವತ್ತೂ ಹಾಗೆಯೇ ತಿರುಗಾಡುತ್ತಿದ್ದ. ಒಂದು ದಿನವೂ ಅವರ ಮನೆಯವರು

ಮಾಳಿಗೆಯ ಮೇಲೆ ಕಂಡಿದ್ದಿಲ್ಲ. ಆದರೆ ಇವತ್ತು ಅಕಸ್ಮಾತ್ ಕಾಲಿಯು ಮಾಳಿಗೆಯ ಮೇಲೆ ಏತಕ್ಕೋ ಬಂದಳು. ಶೇಖರನನ್ನು ನೋಡಿದ ಕೂಡಲೆ ಮುಖವನ್ನು ಬಾಗಿಸಿಕೊಂಡು ಶೇಖರನು ಕೂಗಬೇಕೆನ್ನುವ ಷ್ಟರಲ್ಲಿಯೇ ಹೋಗಿಬಿಟ್ಟಳು. ದಿನಾಲು ಹೋಗಿಬರುತ್ತಿದ್ದ ಮಾಳಿಗೆಯ ಮೇಲಿನ ಮಾರ್ಗವು ಮುಚ್ಚಿದ್ದರ ಕಾರಣವು ಈ ಚಿಕ್ಕ ಹುಡುಗಿ ಕಾಲಿಗೂ ತಿಳಿದುಹೋಗಿದೆ.

ಇನ್ನೊಂದು ತಿಂಗಳು ಕಳೆಯಿತು.

ಒಂದು ದಿನ ಭುವನೇಶ್ವರಿಯವರು ಮಾತನಾಡುತ್ತ "ಇತ್ತೀಚೆಗೆ ಲಾಗಿ ಲಲಿತೆಯನ್ನು ನೀನೂ ಕಂಡಿಲ್ಲವೇನೋ ?" ಎಂದು ಶೇಖರನನ್ನು ಕೇಳಿದರು.

"ಇಲ್ಲ. ಏಕೆ ?"

"ನಿನ್ನೆ ಎರಡು ತಿಂಗಳು ಕಳೆದ ಮೇಲೆ ಅವಳನ್ನು ನೋಡಿದೆ. ಒಂದೆರಡು ಮಾತುಗಳನ್ನು ಆಡಿದೆ. ಪಾಪ. ಹುಡುಗಿ ಮೊದಲಿನಂತೆ ಇಲ್ಲವೇ ಇಲ್ಲ. ಸೊರಗಿ ಸೊರಗಿ ಕಡ್ಡಿಯಾಗಿದ್ದಾಳೆ. ಮುಖವೆಲ್ಲವೂ ಬಾಡಿಹೋಗಿದೆ. ವಯಸ್ಸಾದವಳಂತೆ ಕಾಣುತ್ತಾಳೆ. ೧೪ ವರ್ಷದ ಲಲಿತೆಯಂತೆ ಕಾಣುವದೇ ಇಲ್ಲ." ಕಂಬನಿಗಳನ್ನು ಒರೆಸಿಕೊಂಡು ಮತ್ತೆ ಭುವನೇಶ್ವರೀದೇವಿಯವರು "ಹೊಲಸು ಸೀರೆಯನ್ನುಟ್ಟಿದ್ದಳು, ಅದು ಸ್ವಲ್ಪ ಸೆರಗಿನ ಬಳಿ ಹರಿದಿತ್ತು. ಮಗೂ, ಹತ್ತರ ಬಟ್ಟೆಯಿಲ್ಲ ವೇನೋ ಎಂದೆ. ಇದೆಯೆಂದು ಹೇಳಿದಳು. ಆದರೆ ಇಲ್ಲವೆಂದೇ ನನ್ನ ವಿಶ್ವಾಸ. ಅವಳು ತನ್ನ ಮಾವನು ಕೊಡಿಸಿದ ಸೀರೆಯನ್ನು ಉಟ್ಟುಕೊ ಳ್ಳುವದೇ ಇಲ್ಲ, ನಾನು ಕೊಟ್ಟದ್ದನ್ನೇ ಉಟ್ಟುಕೊಳ್ಳುತ್ತಾಳೆ. ೫-೬ ತಿಂಗಳುಗಳಿಂದ ನಾನು ಅವಳಿಗೆ ಸೀರೆ ಮುಂತಾದ ಬಟ್ಟೆಗಳನ್ನು ಕೊಟ್ಟಿಲ್ಲ" ಎಂದರು.

ಮುಂದೆ ಮಾತನಾಡುವದು ಆಗಲಿಲ್ಲ. ಕಣ್ಣು ಒರೆಸಿಕೊಳ್ಳ ಲಾರಂಭಿಸಿದರು. ವಾಸ್ತವವಾಗಿಯೂ ಅವರು ಲಲಿತೆಯನ್ನು ತಮ್ಮ ಮಗಳಂತೆ ಪ್ರೀತಿಸುತ್ತಿದ್ದರು.

ಶೇಖರ ಒಂದೆಡೆ ನೋಡುತ್ತ ಸುಮ್ಮನೆ ಕುಳಿತು ಕೇಳುತ್ತಿದ್ದ. ಭುವನೇಶ್ವರೀದೇವಿಯವರೇ ಮಾತು ಮುಂದುವರಿಸಿದರು—"ನನ್ನನ್ನು ಬಿಟ್ಟು ಅವಳು ಯಾರನ್ನೂ ಬೇಡುವದಿಲ್ಲ. ಹಸಿವಾದರೂ ಬಾಯಿಬಿಚ್ಚಿ ಕೊಡಿ ಎಂದು ಯಾರನ್ನೂ ಕೇಳುತ್ತಿರಲಿಲ್ಲ. ನನ್ನ ಹತ್ತಿರ ಬಂದು ಸುಳಿದಾಡಲಾರಂಭಿಸುತ್ತಿದ್ದಳು. ಅವಳ ಮುಖವನ್ನು ನೋಡಿ ಹಸಿವು ಆದುದನ್ನು ಕಂಡುಹಿಡಿದು ತಿಂಡಿ ಕೊಡುತ್ತಿದ್ದೆ. ಇದು ಈಗಲೂ ಜ್ಞಾಪಕಕ್ಕೆ ಬರುತ್ತೆ. ಶೇಖರ, ಅಲ್ಲಿಯೂ ಅವಳು ಹೀಗೆಯೇ ಸುಳಿದಾಡುತ್ತಿರಬಹುದು. ಯಾರೂ ಅವಳನ್ನು ಮಾತನಾಡಿಸುತ್ತಿರಲಿಕ್ಕಿಲ್ಲ; ಹಸಿದಿದ್ದಾಳೆನ್ನುವದೂ ಯಾರಿಗೂ ತಿಳಿಯುತ್ತಿರಲಿಕ್ಕಿಲ್ಲ. ಕೇವಲ ಬಾಯಿಂದ ನನ್ನನ್ನು ಅಮ್ಮಾ ಎಂದು ಕರೆಯುತ್ತಿದ್ದಿಲ್ಲ. ನನ್ನಲ್ಲಿ ಅವಳಿಗೆ ಅಗಾಧಶ್ರದ್ಧೆಯೂ, ಅತುಲ ಭಕ್ತಿಯೂ ಇತ್ತು; ಈವಾಗಲೂ ಇದೆ ಶೇಖರ."

ತನ್ನ ತಾಯಿಯ ಕಡೆಗೆ ನೋಡುವ ಸಾಹಸವಾಗಲಿಲ್ಲ. ಎತ್ತ ನೊಡುತ್ತಿದ್ದನೋ ಅತ್ತೇ ನೋಡುತ್ತ "ಹಾಗಿದ್ದರೆ ಅಮ್ಮಾ, ನೀನು ಅವಳನ್ನು ಕರೆಸಿ ಏನೇನು ಬೇಕೆನ್ನುವದನ್ನು ಕೇಳಿ ಕೊಡುವದಿಲ್ಲ ವೇಕೆ?" ಎಂದ ಶೇಖರ.

"ನಾನು ಕೊಟ್ಟರೆ ಅವಳು ತೆಗೆದುಕೊಳ್ಳುವಳೆ? ನಿನ್ನ ತಂದೆಯವರು ಮಾಳಿಗೆಯ ಮೇಲಿನ ಮಾರ್ಗವನ್ನು ಮುಚ್ಚಿಬಿಟ್ಟರು. ಅವಳಿಗೆ ಸಾಮಾನುಗಳನ್ನು ಕೊಡುವದಕ್ಕೆ ನಾನು ಯಾವ ಮಾರ್ಗದಿಂದ ಹೋಗಬೇಕು? ಗುರುಚರಣರು ದುಃಖದಿಂದ ಧರ್ಮಪರಿವರ್ತನೆ ಮಾಡಿದರು; ಆದರೆ ನಾವು ಅವರಿಗೆ ಪ್ರಾಯಶ್ಚಿತ್ತ ಕೊಡಿಸಿ ಪುನಃ ಧರ್ಮದಲ್ಲಿ ತೆಗೆದು ಕೊಳ್ಳಬಹುದಾಗಿತ್ತು. ಹಾಗೇನೂ ನಾವು ಮಾಡಲಿಲ್ಲ. ಅವರನ್ನು ಸಂಪೂರ್ಣ ಪರಕೀಯರನ್ನಾಗಿ ಮಾಡಿದೆವು! ಇದು ಒಳ್ಳೆಯದಾಯಿತೆ? ಅವರು ತಮ್ಮ ಧರ್ಮವನ್ನು ಬಿಟ್ಟದ್ದೂ ನಿನ್ನ ತಂದೆಯವರ ತೊಂದರೆಯಿಂದಲೇ ಎಂದು ನಾನು ಎನ್ನುತ್ತೇನೆ. ಗಿರೀಂದ್ರ ಒಳ್ಳೇ ಹುಡುಗ. ಅವರಿಗೆ ನಮಗಿಂತಲೂ ಹೆಚ್ಚು ಸಹಾಯ ಮಾಡುತ್ತಾನೆ. ಅವನೊಡನೆ

ಲಲಿತೆಯ ಮದಿವೆಯಾದರೆ ಹುಡುಗಿ ಸುಖದಿಂದ ಬಾಳುವಳೆಂದು ಎನಿಸುತ್ತೆ. ಮುಂದಿನ ಮಾಸದಲ್ಲಿ ಮದಿವೆಯೆಂದು ಕೇಳುತ್ತೇನೆ."

ಒಮ್ಮೆಲೆ ಮುಖ ತಿರುಗಿಸಿ ಶೇಖರ "ಮುಂದಿನ ತಿಂಗಳಲ್ಲಿಯೇ ಆಗುವದೇನು? ಎಲ್ಲ ನಿಶ್ಚಿತವಾಯಿತೆ?" ಎಂದು ಕೇಳಿದ.

"ಹೀಗೆಯೇ ಇದೆ ಸುದ್ದಿ."

ಮತ್ತೆ ಶೇಖರನೇನೂ ಕೇಳಲಿಲ್ಲ.

ಭುವನೇಶ್ವರೀದೇವಿಯವರೇ ಸ್ವಲ್ಪ ಹೊತ್ತು ಸುಮ್ಮನಿದ್ದು "ತನ್ನ ಮಾವನ ಪ್ರಕೃತಿ ಸರಿಯಾಗಿಲ್ಲವೆಂದು ಲಲಿತೆ ಹೇಳಿದಳು. ಹೌದು. ಪಾಪ ಏನು ಮಾಡುವರು? ಗುರುಚರಣರ ಮನಸ್ಸಿನಲ್ಲ ಶಾಂತಿಯಿಲ್ಲ, ಸುಖವೂ ಇಲ್ಲ. ಮೇಲಾಗಿ ಮನೆಯಲ್ಲಿ ಸದಾ ರೋದನ. ಮನಸ್ಸಿಗೆ ಸಮಾಧಾನ ಸಿಕ್ಕುವದಾದರೂ ಹೇಗೆ?" ಎಂದರು.

ಶೇಖರನು ಮಾತನಾಡಲಿಲ್ಲ. ಸುಮ್ಮನೆ ಕುಳಿತುಕೊಂಡು ಕೇಳುತ್ತಿದ್ದ. ಭುವನೇಶ್ವರೀದೇವಿಯವರು ಎದ್ದುಹೋದ ಮೇಲೆ ತನ್ನ ರೂಮಿಗೆ ಬಂದು ಮಂಚದ ಮೇಲೆ ಮಲಗಿ ಲಲಿತೆಯ ವಿಷಯವಾಗಿ ಪುನಃ ಯೋಚಿಸತೊಡಗಿದ.

ಶೇಖರನಿದ್ದ ಬೀದಿ ತೀರ ಚಿಕ್ಕದು. ಅದು ಅಗಲವಾಗಿರಲಿಲ್ಲ. ಎರಡು ಜಟಕಾಗಾಡಿಗಳು ಏಕಕಾಲಕ್ಕೆ ಹೋಗಿಬರುವಂತೆ ಇರಲಿಲ್ಲ; ಇಷ್ಟು ಇಕ್ಕಟ್ಟಾಗಿತ್ತು. ೮-೧೦ ದಿನಗಳಾದ ಬಳಿಕ ಒಂದು ದಿನ ಶೇಖರ ತನ್ನ ಆಫೀಸಿನಿಂದ ಜಟಕಾದಲ್ಲ ಹಿಂತಿರುಗಿ ಬರುತ್ತಿದ್ದ. ಗುರುಚರಣರ ಮನೆಯ ಮುಂದೆ ಜಟಕಾ ನಿಂತಿತ್ತು. ಆದ್ದರಿಂದ ಇವನ ಜಟಕಾ ಮುಂದಕ್ಕೆ ಸಾಗುವಂತಿರಲಿಲ್ಲ. ಕಾರಣ ಆವನು ಕೆಳಗಿಳಿದು ವಿಚಾರಿಸಿದ. ಡಾಕ್ಟರುಗಳು ಬಂದಿದ್ದಾರೆಂದು ತಿಳಿಯಿತು.

ಗುರುಚರಣರಿಗೆ ಕಾಯಿಲೆಯಾಗಿದೆಯೆಂದು ಈ ಮೊದಲು ಅವನಿಗೆ ತನ್ನ ತಾಯಿಯಿಂದ ಗೊತ್ತಾಗಿತ್ತು. ಆದುದರಿಂದ ಅವನು ನೇರವಾಗಿ ಗುರುಚರಣರ ಮನೆಯೊಳಕ್ಕೆ ಪ್ರವೇಶಮಾಡಿ ಅವರು ಮಲಗಿದ್ದ ರೂಮಿಗೆ ಹೋದ. ಗುರುಚರಣರು ಶವದಂತೆ ಹಾಸಿಗೆಯ ಮೇಲೆ ಮಲ

ಗಿದ್ದರು. ಒಂದೆಡೆ ಗಿರೀಂದ್ರ ಮತ್ತು ಲಲಿತೆ ಕುಳಿತಿದ್ದರು. ಅವರ ಮುಖಗಳು ಬಾಡಿದ್ದವು. ಗುರುಚರಣರ ಸಮ್ಮುಖದಲ್ಲಿ ಕುಳಿತು ಕೊಂಡು ಡಾಕ್ಟರು ಅವರನ್ನು ಪರೀಕ್ಷಿಸುತ್ತಿದ್ದರು.

ಶೇಖರನನ್ನು ನೋಡುತ್ತಲೇ ಅವನಿಗೆ ಕುಳಿತುಕೊಳ್ಳಲು ಹೇಳಿದರು ಗುರುಚರಣರು. ಲಲಿತೆಯು ಮುಖದ ಮುಂದೆ ಸೆರಗು ಎಳೆದು ಕೊಂಡು ತಿರುಗಿ ಕುಳಿತಳು.

ಡಾಕ್ಟರು ಅದೇ ಬೀದಿಯ ಬಳಿ ಇದ್ದವರು. ಶೇಖರನ ಪರಿಚಯ ವಿತ್ತು ಸಾಕಷ್ಟು ಅವರಿಗೆ. ಆದುದರಿಂದ ಅವರು ರೋಗಿಗೆ ಔಷಧ ಕೊಟ್ಟು ಶೇಖರನನ್ನು ಕರೆದುಕೊಂಡು ಪಡಸಾಲೆಗೆ ಬಂದು ಕುಳಿತರು. ಆ ಮೇಲೆ ಗಿರೀಂದ್ರ ಬಂದು ಡಾಕ್ಟರಿಗೆ ಫೀಸು ಕೊಟ್ಟ. ರೋಗ ದೊಡ್ಡ ದಾಗಿಲ್ಲ, ಆದರೂ ಹವೆ ಬದಲಾಯಿಸುವದು ಹಿತಕರವೆಂದು ಅವರು ಅಭಿಪ್ರಾಯವನ್ನಿತ್ತರು.

ಡಾಕ್ಟರರು ಹೋದ ಮೇಲೆ ಗಿರೀಂದ್ರ ಮತ್ತು ಶೇಖರ ಇಬ್ಬರೂ ಒಳಗೆ ಬಂದರು. ಪುನಃ ಗುರುಚರಣರು ಶೇಖರನಿಗೆ ಸಮೀಪದಲ್ಲಿ ಕುಳಿತುಕೊಳ್ಳಲು ಹೇಳಿದರು.

ಸನ್ನೆ ಮಾಡಿ ಗಿರೀಂದ್ರನನ್ನು ಒಳಗೆ ಕರೆದುಕೊಂಡು ಹೋಗಿ ಲಲಿತೆಯು ಅವನೊಡನೆ ಮೆಲ್ಲಗೆ ಮಾತನಾಡಲಾರಂಭಿಸಿದಳು. ಖುರ್ಚಿಯ ಮೇಲೆ ಕುಳಿತುಕೊಂಡು ಶೇಖರ ಸ್ತಬ್ಧಭಾವದಿಂದ ಗುರುಚರಣರನ್ನು ನೋಡಲಾರಂಭಿಸಿದ. ಗುರುಚರಣರು ರೋಗದ ಪೀಡನೆಯಿಂದ ಕಣ್ಣು ಮುಚ್ಚಿಕೊಂಡು ಮಗ್ಗಲಾಗಿ ಮಲಗಿದರು. ಸ್ವಲ್ಪ ಹೊತ್ತು ಕುಳಿತು ಶೇಖರ ಎದ್ದು ಹೊರಟುಹೋದ. ಇಂದಿನ ಪರಿಸ್ಥಿತಿಯನ್ನು ನೋಡಿ ಅವನಿಗೆ ಆಶ್ಚರ್ಯ. ಅವನನ್ನು ಯಾರೂ ಕರೆಯಲಿಲ್ಲ. ಗುರುಚರಣರನ್ನು ಬಿಟ್ಟು ಯಾರೂ ಅವನಿಗೆ ಕುಳಿತುಕೊಳ್ಳಲು ಹೇಳಲಿಲ್ಲ. ಮಾತ ನಾಡಲೂ ಇಲ್ಲ.

ಲಲಿತೆಯು ತನ್ನನ್ನು ಒಂದು ದೊಡ್ಡ ಕೊಣೆಯಿಂದ ಮುಕ್ತ ಮಾಡಿ ದಳು, ತಾನು ಸ್ವತಂತ್ರನಾಗಿ ಇನ್ನು ಉಸುರಾಡಿಸಬಹುದು; ಯಾವ

ಸಂಶಯವೂ ಇನ್ನು ಇಲ್ಲ—ಲಲಿತೆಯು ತನ್ನನ್ನು ಆಲಿಂಗಿಸಳು, ಎಂದು ನಿಶ್ಚಯ ಮಾಡಿಕೊಂಡ. ಗುರುಚರಣರ ಮನೆಗೆ ಹೋಗಿ ಗಿರೀಂದ್ರನೇ ಅವರ ಪರಮ ಹಿತೈಷಿ, ಸರ್ವರ ಆಶಾಂಕುರ ಮತ್ತು ಲಲಿತೆಯ ಭಾವೀ ಆಶ್ರಯದಾತ ಎನ್ನುವದನ್ನು ತಾನೇ ನೋಡಿ ಬಂದಿದ್ದಾನೆ. ಈ ನೋಟವೇ ಅವನ ನಯನಗಳ ಎದುರಿಗೆ ಆಗಾಗ್ಗೆ ಬರುತ್ತಿದೆ—ತಾನು, ತಾನು ಯಾರು! ಯಾರೂ ಅಲ್ಲ. ಇಂತಹ ಸಂಕಟ ಸಮಯದಲ್ಲಿಯೂ ತನ್ನ ಸಲಹೆಯನ್ನು ಕೇಳಲಿಲ್ಲ ಲಲಿತೆ!

"ಓಃ" ಎಂದವನೇ ಶೇಖರ ತನ್ನ ಆರಾಮಖುರ್ಚಿಯ ಮೇಲೆ ಕುಳಿತ. ತನ್ನನ್ನು ನೋಡುತ್ತಲೇ ಅತ್ಯಂತ ಅಪರಿಚಿತಳಂತೆ, ಪರಕೀಯ ಳಂತೆ ತನ್ನ ಮುಖದ ಮುಂದೆ ಸೆರಗು ಎಳೆದುಕೊಂಡು ಹೊರಳಿ ಕುಳಿತು ಕೊಂಡಳು ಲಲಿತೆ! ತನ್ನ ಎದುರಿನಲ್ಲಿಯೇ ಗಿರೀಂದ್ರನನ್ನು ಒಳಗೆ ಕರೆದು ಕೊಂಡು ಹೋಗಿ ಏಕಾಂತದಲ್ಲಿ ಅವನ ಸಲಹೆ ಕೇಳುತ್ತಿದ್ದಳು ಲಲಿತೆ! ಒಂದು ದಿನ ಈ ಗಿರೀಂದ್ರನ ಜೊತೆಗೇ ಸಿನೇಮಾಕ್ಕೆ ಹೋಗಲು ತಾನು ಅಪ್ಪಣೆಯನ್ನೀಯುತ್ತಿದ್ದಿಲ್ಲ ಲಲಿತೆಗೆ!

ತಮ್ಮಿಬ್ಬರ ಗುಪ್ತ-ಸಂಬಂಧದ ನೆನಪು ಬಂದು ನಾಚಿಕೆಯಿಂದ ಹೀಗೆ ಮಾಡಿರಬಹುದು ಲಲಿತೆ. ಇದು ಸಂಭವವಿದೆಯೆ? ಇದ್ದುದೇ ಆಗಿದ್ದರೆ ಒಂದು ದಿನವಾದರೂ ಅವ್ರದಾವರೂ ನೆಪದಿಂದ, ಕುಶಲತೆ ಯಿಂದ ತನ್ನನ್ನು ಕಂಡು ಸಲಹೆಯನ್ನು ಕೇಳುವದಕ್ಕೆ ಆಗುತ್ತಿರಲಿಲ್ಲವೆ ಲಲಿತೆಗೆ! ಈ ತೆರನಾಗಿ ಬಲಾತ್ಕಾರದಿಂದ ವಿಚಾರಮಾಡಲು ತೊಡಗಿದ.

ಇಷ್ಟರಲ್ಲಿ ಅವನ ತಾಯಿಯವರು ಬಂದು "ಎಲ್ಲಿದ್ದೀಯೊ? ಇನ್ನೂ ಕೈಕಾಲು ಮುಖ ತೊಳೆದುಕೊಂಡೇ ಇಲ್ಲವಲ್ಲ, ಸಾಯಂಕಾಲವಾಯಿತು" ಎಂದರು.

ಕೂಡಲೇ ಎದ್ದು ತಾಯಿಗೆ ಮುಖಭಾವವನ್ನು ತೋರಗೊಡಬಾರ ದೆಂದು ಮುಖ ತಿರುಗಿಸಿಕೊಂಡು ಕೆಳಗಿಳಿದು ಹೋದ.

ಇತ್ತ ಎಷ್ಟೋ ದಿನಗಳಿಂದ ಅವನ ಮನದಲ್ಲಿ ಅನೇಕ ವಿಚಾರ ಗಳು ಉತ್ಪನ್ನವಾಗುತ್ತಲಿವೆ. ಅವುಗಳನ್ನು ಕುರಿತು ಅವನು ಯೋಚಿ

ಸುತ್ತಿರುತ್ತಾನೆ *"ತಪ್ಪು ಯಾರದು" ಎಂದು. ಇಲ್ಲಿಯ ವರೆಗೆ ತಾನು ಲಲಿತೆಗೆ ಆಶಾಜನಕವಾದ ಮಾತನ್ನು ಹೇಳಲಿಲ್ಲ, ಹೇಳುವಂತಹ ಪ್ರಸಂಗವನ್ನೂ ತಂದುಕೊಳ್ಳಲಿಲ್ಲ. ಹಿಂದಿನ ವಿಷಯವನ್ನೆಲ್ಲ ಪ್ರಕಟಮಾಡಿ ಎಲ್ಲಿ ತನ್ನ ಅಧಿಕಾರವನ್ನು ಪಡೆದುಕೊಳ್ಳುವಳೋ ಎಂಬುದೊಂದು ಅಂಜಿಕೆಯೂ ಅವನಿಗಿತ್ತು. ಆದುದರಿಂದ ಅವನು ಎಲ್ಲ ದೋಷವನ್ನು ಲಲಿತೆಯ ಮೇಲೆ ಹೊರಿಸಿ, ತಾನು ಅಸೂಯೆ, ಅಪಮಾನ ಮತ್ತು ಅಭಿಮಾನದ ಚಿಂತೆಯಲ್ಲಿ ಬಿದ್ದು ಬೆಂದಾಗುತ್ತಿದ್ದ. ಪ್ರಪಂಚದಲ್ಲಿಯ ಪುರುಷರು ಎಲ್ಲರೂ ಇದೇ ರೀತಿಯಾಗಿ ವಿಚಾರ ಮಾಡುವಂತೆ ಕಾಣುತ್ತೆ.

ಇಂತು ತನ್ನ ಶಾಂತವಾದ ರೂಮಿನಲ್ಲಿ ವಿಚಾರಚಿತೆಯ ಕುಲಿಮೆಯನ್ನು ಹೊತ್ತಿಸಿಕೊಂಡು ಕುಳಿತುಕೊಂಡಿದ್ದ. ಒಮ್ಮಿಂದೊಮ್ಮೆಲೆ ಬಾಗಿಲು ಬಳಿ ಹೆಜ್ಜೆಯ ಶಬ್ದವಾಯಿತು. ಕಾಲಿಯ ಕೈ ಹಿಡಿದುಕೊಂಡು ಲಲಿತು ಬಂದು ಕೆಳಗೆ ಹಾಸಿದ ರತ್ನಗಂಬಳಿಯ ಮೇಲೆ ಕುಳಿತಳು. ಕಾಲಿಯು ಶೇಖರಣ್ಣ, "ನಾವಿಬ್ಬರೂ ನಿಮಗೆ ನಮಸ್ಕಾರ ಮಾಡಿ ಊರಿಗೆ ಹೋಗಿಬರುತ್ತೇವೆಂದು ಹೇಳಲು ಬಂದಿದ್ದೇವೆ" ಎಂದಳು.

ಶೇಖರನ ಮುಖದಿಂದ ಶಬ್ದಗಳೇ ಹೊರಬೀಳಲಿಲ್ಲ. ಅವನು ಏಕದೃಷ್ಟಿಯಿಂದ ನೋಡುತ್ತಿದ್ದ.

"ನಮ್ಮಿಂದೇನಾದರೂ ಅಪರಾಧಗಳಾಗಿದ್ದರೆ ಅವೆಲ್ಲವನ್ನೂ ಮರೆತುಬಿಡಿ. ನಮ್ಮನ್ನು ಕ್ಷಮಿಸಿ" ಎಂದಳು ಕಾಲಿ.

ಇದರಲ್ಲಿ ಒಂದಕ್ಷರವೂ ಕಾಲಿಯದಿಲ್ಲವೆಂದು ಶೇಖರ ತಿಳಿದುಕೊಂಡ. ಕಲಿಸಿದ ಮಾತುಗಳನ್ನು ಗ್ರಾಮಾಫೋನಿನಂತೆ ಹೇಳುತ್ತಿದ್ದಾಳೆನ್ನುವದು ಚೆನ್ನಾಗಿ ಮನವರಿಕೆಯಾಯಿತು. "ನೀವೆಲ್ಲಿಗೆ ಹೊಗುವಿರಿ?" ಎಂದು ಕೇಳಿದ.

"ತಂದೆಯವರನ್ನು ಕರೆದುಕೊಂಡು ಮುಂಗೇರಿಗೆ ಹೋಗುವೆವು. ಅಲ್ಲಿಯೇ ಗಿರೀಂದ್ರಬಾಬುಗಳ ಮನೆಯಿದೆ. ತಂದೆಯವರಿಗೆ ಗುಣವಾದ ಬಳಿಕ ಸಹ ಇಲ್ಲಿಗೆ ಹಿಂತಿರುಗಿ ಬರುವ ಸಂಭವವಿಲ್ಲ. ಈ ಊರಿನ ಹವೆ ತಂದೆಯವರ ಆರೋಗ್ಯಕ್ಕೆ ಒಳ್ಳೆಯದಲ್ಲವೆಂದು ಡಾಕ್ಟರು ಹೇಳಿದ್ದಾರೆ"

ಎಂದಳು ಕಾಲಿ.

"ಈವಾಗ ಅವರ ಆರೋಗ್ಯ ಹೇಗಿದೆ?"

"ಸ್ವಲ್ಪ ಗುಣವಾಗಿದೆ" ಎಂದು ಸೀರೆಯ ಸೆರಗಿನಲ್ಲಿ ಕಟ್ಟಿ ತಂದ ಸೀರೆಗಳನ್ನು ತೋರಿಸಿ "ಇವುಗಳನ್ನು ಭುವನೇಶ್ವರೀದೇವಿಯವರು ಖರೀದಿಮಾಡಿ ಕೊಟ್ಟಿದ್ದಾರೆ" ಎಂದಳು ಕಾಲಿ.

ಲಲಿತೆಯು ಈ ವರೆಗೆ ಸುಮ್ಮನೆ ಕುಳಿತಿದ್ದವಳು ಎದ್ದು ಮೇಜಿನ ಬಳಿ ಹೋಗಿ, ಅದರ ಮೇಲೆ ಬೀಗದ ಕೈಯಿಟ್ಟು "ಖಜಾನೆಯ ಬೀಗದ ಕೈ ಈ ವರೆಗೆ ನನ್ನ ಹತ್ತಿರವೇ ಇತ್ತು. (ಸ್ವಲ್ಪ ನಕ್ಕು) ಈವಾಗ ಖಜಾನೆಯಲ್ಲಿ ಏನೂ ಇಲ್ಲ. ಎಲ್ಲ ರೂಪಾಯಿ ಖರ್ಚಾದವು" ಎಂದಳು.

ಶೇಖರ ಸುಮ್ಮನಿದ್ದ.

"ನಡೆ ರಾತ್ರಿಯಾಗುತ್ತಿದೆ ಲಲಿತಕ್ಕ" ಎಂದಳು ಕಾಲಿ.

ಲಲಿತೆಯು ಏಳುವದಕ್ಕೆ ಮುಂಚಿತವಾಗಿಯೇ "ಕಾಲೀ, ಸ್ವಲ್ಪ ಕೆಳಗೆ ಹೋಗಿ ಎಲೆಅಡಿಕೆ ತೆಗೆದುಕೊಂಡು ಬಾ" ಎಂದು ಕಾಲಿಗೆ ಹೇಳಿದ ಶೇಖರ.

ಲಲಿತೆಯು ಕಾಲಿಯ ಕೈಹಿಡಿದು "ನೀನು ಇಲ್ಲಿಯೇ ಕುಳಿತುಕೋ. ನಾನೇ ಹೋಗಿ ತೆಗೆದುಕೊಂಡು ಬರುತ್ತೇನೆ" ಎಂದು ಕೆಳಗೆ ಹೋಗಿ ಎಲೆ ಅಡಿಕೆ ತೆಗೆದುಕೊಂಡು ಬಂದು ಕಾಲಿಯ ಕೈಯಲ್ಲಿ ಕೊಟ್ಟಳು. ಕಾಲಿಯು ಶೇಖರನಿಗೆ ಕೊಟ್ಟಳು.

ತಾಂಬೂಲವನ್ನು ಕೈಯಲ್ಲಿ ತೆಗೆದುಕೊಂಡು ಸುಮ್ಮನೆ ಸ್ತಂಭಿತನಾಗಿ ಕುಳಿತ ಶೇಖರ.

ಶೇಖರನ ಪಾದಗಳ ಮೇಲೆ ಮಸ್ತಕವನ್ನಿಟ್ಟು ಕಾಲಿಯು ವಂದಿಸಿದಳು. ಲಲಿತೆಯು ನಿಂತಲ್ಲಿಯೇ ನೆಲದ ಮೇಲೆ ತಲೆಯಿಟ್ಟು ಸಾಷ್ಟಾಂಗ ನಮಸ್ಕಾರಮಾಡಿ ಕಾಲಿಯ ಕೈಹಿಡಿದುಕೊಂಡು ಮೆಲ್ಲಗೆ ಹೊರಟು ಹೋದಳು.

ತನ್ನ ಆತ್ಮಮರ್ಯಾದೆಯನ್ನುಳಿಸಿಕೊಂಡು ಕುಂದಿದ ಮುಖವನ್ನು ಕೆಳಗೆ ಮಾಡಿಕೊಂಡು ವಿಹ್ವಲನಾಗಿ ಶೇಖರ ಕುಳಿತಿದ್ದ. ಲಲಿತೆಯು ಬಂದು ಹೇಳುವದನ್ನೆಲ್ಲ ಹೇಳಿ ಹೋಗಿಬಿಟ್ಟಳು; ಕೊನೆಯವರೆಗೆ ಹೋಗಿಬಿಟ್ಟಳು; ಆದರೆ ಶೇಖರನು ತನ್ನ ಹೃದಯವನ್ನು ಅವಳೆದುರಿಗೆ

ಬಿಚ್ಚಿ ತೋರಿಸದಾದ. ಹೇಳುವದಕ್ಕೇನೂ ಇರಲಿಲ್ಲವೆನ್ನುವ ಹಾಗೆ ಹೊತ್ತಿನ ಹಕ್ಕಿಯು ಹಾರಿಹೋಯಿತು. ಶೇಖರನ ಶರೀರ ಕಂಪಿಸ ಲಾರಂಭಿಸಿತು. ಕಣ್ಣುಗಳಲ್ಲಿ ಕತ್ತಲೆ ಕವಿಯಲಾರಂಭಿಸಿತು. ಹಾಗೆಯೇ ಕಣ್ಣು ಮುಚ್ಚಿಕೊಂಡು ಹಾಸಿಗೆಯ ಮೇಲೆ ಬಿದ್ದುಬಿಟ್ಟ.

೧೧

ಗುರುಚರಣರ ಆರೋಗ್ಯ ಮುಂಗೇರಿಗೆ ಹೋದರೂ ಸುಧಾರಿಸ ಲಿಲ್ಲ. ಒಂದು ವರ್ಷದ ನಂತರ ದುಃಖದ ಅತ್ಯಂತ ಭಾರವಾದ ಹೊರೆ ಯನ್ನು ಕೆಳಗಿಳಿಸಿ ಸಂಸಾರದಿಂದ ಮುಕ್ತಿಯನ್ನು ಪಡೆದರು.

ಗಿರೀಂದ್ರ ಅವರನ್ನು ಅಂತಃಕರಣಪೂರ್ವಕವಾಗಿ ಪ್ರೀತಿಸುತ್ತಿದ್ದ. ಆದುದರಿಂದ ಅವರು ಸಾಯುವ ವರೆಗೂ ಮನಃಪೂರ್ವಕವಾಗಿ ಅವರ ಸೇವೆ-ಶುಶ್ರೂಷೆ ಮಾಡಿದ.

ಗುರುಚರಣರು ಸಾಯುವ ಪೂರ್ವದಲ್ಲಿ ತಮ್ಮ ಪರಿವಾರವನ್ನು ಪರ ಕೀಯವೆಂದು ಭಾವಿಸಬಾರದೆಂದು ಗಿರೀಂದ್ರನ ಕೈಹಿಡಿದು ಹೇಳಿದ್ದರು. ಗಿರೀಂದ್ರನು ತಮ್ಮ ಅಳಿಯನಾಗಬೇಕು ಎಂದಿಷ್ಟೇ ಅವರು ಹೇಳಿದ್ದರ ತಾತ್ಪರ್ಯ. ಗುರುಚರಣರು "ನಾನು ಈ ಸುಖವಾದ ಸಂಬಂಧವನ್ನು ಇಲ್ಲಿದ್ದುಕೊಂಡು ನೋಡದಿದ್ದರೂ ಪರಲೋಕದಲ್ಲಿ ಕುಳಿತು ಆನಂದದಿಂದ ನೋಡುತ್ತೇನೆ. ನನ್ನ ಆಶೆಯನ್ನು ಪೂರ್ಣಮಾಡಬೇಕು" ಎಂದು ಕೇಳಿಕೊಂಡಿದ್ದರು.

ಆ ಪ್ರಕಾರ ಮಾಡುವೆನೆಂದು ಗಿರೀಂದ್ರನು ಅವರಿಗೆ ವಚನವನ್ನಿ ತ್ತಿದ್ದ.

ಗುರುಚರಣರ ಬಳಗದವರು ಕಲ್ಕತ್ತೆಯಲ್ಲಿ ಇರುತ್ತಿದ್ದರು. ಅವರ ಮುಖಾಂತರ ಗುರುಚರಣರ ಪರಿವಾರದ ಸಮಾಚಾರ ಭುವನೇ ಶ್ವರೀದೇವಿಯವರಿಗೆ ಗೊತ್ತಾಗುತ್ತಿತ್ತು. ಗುರುಚರಣರು ಕೈಲಾಸ ವಾಸಿಗಳಾದ ಸುದ್ದಿಯೂ ಅವರಿಗೆ ತಿಳಿಯಿತು.

ಇತ್ತ ಒಮ್ಮಿಂದೊಮ್ಮೆ ಶೇಖರನ ಮನೆಯಲ್ಲಿ ಒಂದು ದುರ್ಘಟನೆ ನಡೆಯಿತು. ನವೀನರಾಯರು ಆಕಸ್ಮಿಕ ಮರಣ ಹೊಂದಿದರು. ಅಸೀಮ

ವೇದನೆ,ಅಸಹ್ಯ ಶೋಕದಿಂದ ಭುವನೇಶ್ವರೀದೇವಿಯವರು ಹುಚ್ಚಿಯಂತಾದರು. ಹಿರಿಯ ಸೊಸೆಗೆ ಮನೆಯ ಭಾರವನ್ನೆಲ್ಲ ಒಪ್ಪಿಸಿ ಕಾಶೀವಾಸಕ್ಕೆ ಹೋಗಿಬಿಟ್ಟರು. ಹೋಗುವಾಗ ಶೇಖರನ ಮದುವೆಯ ಸಮಾಚಾರವನ್ನು ತಿಳಿಸಿ; ಬಂದು ಮದುವೆ ನೋಡಿ ಆನಂದಪಟ್ಟು ಹೋಗುತ್ತೇನೆ ಎಂದು ಹೇಳಿದ್ದರು.

ನವೀನರಾಯರೇ ಕನ್ಯೆ ಗೊತ್ತು ಮಾಡಿದ್ದರು. ಇಷ್ಟರಲ್ಲಿಯೆ ಮದುವೆಯಾಗಿಹೋಗುತ್ತಿತ್ತು. ಆದರೆ ಅವರು ಆಕಸ್ಮಿಕವಾಗಿ ತೀರಿಹೋದದ್ದರಿಂದ ಮದುವೆಯನ್ನು ಒಂದು ವರ್ಷ ಮುಂದಕ್ಕೆ ಹಾಕಬೇಕಾಯಿತು. ಆದರೆ ಹುಡುಗಿಯ ಕಡೆಯವರು ಇಷ್ಟು ದಿವಸ ತಡೆಯುವಂತಿದ್ದಿಲ್ಲ. ಇದೇ ಮಾಸದಲ್ಲಿ ಮದುವೆಯಾಗಬೇಕೆಂದು ನಿಶ್ಚಯ ಮಾಡಿ ಹೊರಟುಹೋಗಿದ್ದರು. ಆದುದರಿಂದ ತನ್ನ ತಾಯಿಯನ್ನು ಕರೆದುಕೊಂಡು ಬರಬೇಕೆಂದು ಕಾಶಿಗೆ ಹೊರಡುವ ಸಿದ್ಧತೆಯಲ್ಲಿದ್ದ ಶೇಖರ. ಕಪಾಟು ತೆರೆದು ಸಾಮಾನುಗಳನ್ನು ಪೆಟ್ಟಿಗೆಯಲ್ಲಿ ಹಾಕಿಡುವಾಗ ಇಷ್ಟು ದಿನಗಳ ಮೇಲೆ ಶೇಖರನಿಗೆ ಲಲಿತೆಯ ನೆನಪು ಬಂತು. ಏಕೆಂದರೆ ಇವೆಲ್ಲ ಕೆಲಸಗಳನ್ನು ಅವಳೇ ಮಾಡುತ್ತಿದ್ದಳು.

ಲಲಿತೆ ಮೊದಲಾದವರು ಮುಂಗೇರಿಗೆ ಹೋಗಿ ಈವಾಗ ಮೂರು ವರ್ಷಗಳಾಗಿದ್ದವು. ಶೇಖರನಿಗೆ ಅವರ ಸಮಾಚಾರವು ತಿಳಿದಿರಲಿಲ್ಲ. ತಿಳಿದುಕೊಳ್ಳಲು ಬಹುಶಃ ಅವನು ಇಚ್ಛಿಸಿರಲಿಕ್ಕಿಲ್ಲ. ಅವನು ಲಲಿತೆಯನ್ನು ತಿರಸ್ಕರಿಸತೊಡಗಿದ್ದ. ಆದರೆ ಈವೊತ್ತು ಆಕಸ್ಮಾತ್ ಅವರ ಸುದ್ದಿಯನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯಾಯಿತು. ಅವಳ ಮದುವೆಯೇನಾಯಿತು? ಅವಳು ಸುಖದಿಂದ ಇರುವಳೋ ಇಲ್ಲವೋ ಎಂಬುದನ್ನೆಲ್ಲ ಅರಿಯಲು ಮನವು ಹಾತೊರೆಯಲಾರಂಭಿಸಿತು.

ಗುರುಚರಣರ ಕಲ್ಕತ್ತೆಯ ಮನೆಯಲ್ಲಿ ಬಾಡಿಗೆಯವರು ಇರಲಿಲ್ಲ, ಅವರೂ ಹೋಗಿಬಿಟ್ಟಿದ್ದರು. ಮನೆಗೆ ಮತ್ತೆ ಬಾಡಿಗೆಯವರು ಯಾರೂ ಬಂದಿರಲಿಲ್ಲ. ಚಾರುಬಾಲೆಯ ತಂದೆಯವರಿಗೆ ಗುರುಚರಣರ ಸಮಾಚಾರ ಗೊತ್ತಿರಬಹುದು. ಅವರನ್ನು ವಿಚಾರಿಸಿ ತಿಳಿದುಕೊಳ್ಳಬೇಕೆಂದು

ಯೋಚಿಸಿದ. ಕ್ಷಣಹೊತ್ತು ಸಾಮಾನುಗಳನ್ನು ಪೆಟ್ಟಿಗೆಯಲ್ಲಿರಿಸುವದನ್ನು ಬಿಟ್ಟು ಶೂನ್ಯದೃಷ್ಟಿಯಿಂದ ಕಿಡಿಕಿಯ ಕಡೆಗೆ ನೋಡುತ್ತ ನಿಂತ. ಮನೆಯ ದಾಸಿಯು ಬಂದು "ಕಾಲಿಯ ಅಮ್ಮನವರು ನಿಮ್ಮನ್ನು ಕರೆಯುತ್ತಿದ್ದಾರೆ" ಎಂದು ಹೇಳಿದಳು.

ಶೇಖರನಿಗೆ ಅತ್ಯಾಶ್ಚರ್ಯ. ಕೇಳಿದ "ಯಾರು ಕರೆಯುತ್ತಾರೆ? ಕಾಲಿಯ ಅಮ್ಮ ಯಾರು?"

ದಾಸಿಯು ಗುರುಚರಣರ ಮನೆಯನ್ನು ತೋರಿಸಿ "ನಮ್ಮ ಪಕ್ಕದ ಮನೆಯ ಕಾಲಿಯ ಅಮ್ಮನವರು. ನಿನ್ನೆ ರಾತ್ರಿ ಮುಂಗೇರಿನಿಂದ ಬಂದು ಬಿಟ್ಟಿದ್ದಾರೆ" ಎಂದಳು.

"ಒಳ್ಳೇದು ನಡೆ. ನಾನು ಈವಾಗ ಬರುತ್ತೇನೆ" ಎಂದು ದಾಸಿಯನ್ನು ಕಳಿಸಿ ತಾನು ಕೆಳಗಿಳಿದು ಹೋದ.

ಆವಾಗ ಸಂಧ್ಯಾಕಾಲವಾಗಿತ್ತು. ನಡುಮನೆಯಲ್ಲಿ ಕಾಲಿಡುತ್ತಲೇ ಹೃದಯವನ್ನು ಭೇದಿಸುವಂತಹ ಕರುಣಕ್ರಂದನವು ಆವನ ಕಿವಿಗೆಬಿತ್ತು. ಗುರುಚರಣರ ವಿಧವಾಪತ್ನಿಯ ಬಳಿಗೆ ಹೋಗಿ ಭೂಮಿಯ ಮೇಲೆಯೆ ಕುಳಿತು, ಪಂಚೆಯಿಂದ ಕಂಬನಿಗಳನ್ನು ಒರೆಸಿಕೊಳ್ಳಲಾರಂಭಿಸಿದ. ಗುರುಚರಣರ ಬಗ್ಗೆ, ಅಷ್ಟೇ ಅಲ್ಲ ತನ್ನ ತಂದೆಯವರ ನೆನಪೂ ಆಗಿ ಅತ್ಯಂತ ಶೋಕಾಕುಲನಾದ.

ಕತ್ತಲಾಯಿತು. ಲಲಿತೆಯು ಬಂದು ದೀಪವನ್ನು ಹಚ್ಚಿದಳು. ದೂರದಿಂದಲೇ ಸೆರಗನ್ನು ಕತ್ತಿನ ಮೇಲೆ ಹಾಕಿಕೊಂಡು ನಮಸ್ಕಾರ ಮಾಡಿದಳು ಶೇಖರನಿಗೆ. ಆ ಮೇಲೆ ಸ್ವಲ್ಪ ಹೊತ್ತು ನಿಂತು ಮೆಲ್ಲ ಮೆಲ್ಲನೆ ಹೊರಟುಹೋದಳು. ಶೇಖರನ ದೃಷ್ಟಿಯಲ್ಲಿ ಈವಾಗ ಲಲಿತೆ ಪರಸ್ತ್ರೀ. ಪರಕೀಯರ ನವಯೌವನದಿಂದ ತುಂಬಿದ ಹೆಂಡತಿಯನ್ನು ಕಣ್ಣೆತ್ತಿ ನೋಡುವದು ಹೇಗೆ? ಕರೆದು ಮಾತನಾಡುವದೆಂತು? ಆದುದರಿಂದಲೇ ಅವನು ಸುಮ್ಮನೆ ಕುಳಿತ. ಆದರೆ ಕುಡಿನೋಟದಿಂದ ಸ್ವಲ್ಪ ಆವಳನ್ನು ನೋಡಿದ. ಮೊದಲಿಗಿಂತಲೂ ಸ್ವಲ್ಪ ದೊಡ್ಡವಳಾದಂತೆಯೂ ಕ್ಷೀಣವಾದ ಹಾಗೂ ಕಂಡಳು.

ಬಹಳ ಹೊತ್ತು ಆಲೋಚನೆಯಾಯಿತು. ಆಮೇಲೆ ಮಾತಿಗೆ ಪ್ರಾರಂಭ ವಾಯಿತು. ಗುರುಚರಣರ ವಿಧವಾಪತ್ನಿ ಹೇಳಿದ್ದುದರ ಸಾರಾಂಶ ಇಷ್ಟೆ :—ಕಲ್ಕತ್ತೆಯಲ್ಲಿದ್ದ ಮನೆಯನ್ನು ಮಾರಿ ಅಳಿಯ ಗಿರೀಂದ್ರನ ಮನೆಯಲ್ಲಿಯೇ ಇರಬೇಕೆಂದು ಮಾಡಿದ್ದೇವೆ. ನಿಮ್ಮ ತಂದೆಯವರು ಈ ಮನೆಯನ್ನು ಬಹಳ ದಿನಗಳಿಂದ ಕೊಳ್ಳಬೇಕೆನ್ನುತ್ತಿದ್ದರು. ನೀವೇ ಅದನ್ನು ಕೊಂಡುಕೊಂಡರೆ ಒಳಿತು. ಮನೆಯು ಪರರೀಯರ ಪಾಲಾ ಗದೆ ನಮ್ಮ ಹಿತೈಷಿಗಳ ಸೊತ್ತಾಗುವದು. ಇದುಪರಿಂದ ಅದನ್ನು ಮಾರು ವದರಿಂದ ಆಗುವ ದುಃಖವೂ ಸಮುಗಾಗುವದಿಲ್ಲ. ಮೇಲಾಗಿ ಅಕಸ್ಮಾತ್ ಯಾವಾಗಾದರೂ ನಾವು ಕಲ್ಕತ್ತೆಗೆ ಬಂದರೆ ಅದರಲ್ಲಿಯೇ ಒಂದೆರಡು ದಿನ ಉಳಕೊಳ್ಳಲು ಅನುವಾಗುವದು.

"ತಾಯಿಯನ್ನು ಕೇಳಿ, ನನ್ನ ಕೈಲಾದಮಟ್ಟಿಗೂ ಯತ್ನಿಸಿ ನಿಮ್ಮ ಬಯಕೆ ಪೂರ್ಣಮಾಡುವೆ" ಎಂದು ಶೇಖರ ವಚನವನ್ನಿತ್ತ.

ಕಣ್ಣೀರು ಒರೆಸಿಕೊಂಡು ಗುರುಚರಣರ ವಿಧವಾಪತ್ನಿಯವರು ಕೇಳಿದರು: "ಭುವನೇಶ್ವರೀದೇವಿಯವರು ಬರುವದಿಲ್ಲವೆ?"

"ಇಂದೇ ರಾತ್ರಿ ಅವರನ್ನು ಕರೆದುಕೊಂಡು ಬರಲು ಹೋಗುವವ ನಿದ್ದೇನೆ" ಎಂದ ಶೇಖರ.

ಶೇಖರನ ವಿವಾಹ ಎಂದು, ಎಷ್ಟು ವರದಕ್ಷಿಣೆ, ಹುಡುಗಿಯ ಮೈ ಮೇಲೆ ಯಾವಯಾವ ಆಭರಣಗಳನ್ನಿಡುವದು, ನವೀನರಾಯರು ಯಾವಾಗ ಯಾವ ಕಾರಣದಿಂದ ತೀರಿದರು, ಭುವನೇಶ್ವರೀದೇವಿಯವರು ಈಗ ಅಲ್ಲಿದ್ದು ಏನು ಮಾಡುತ್ತಿದ್ದಾರೆ? ಎಲ್ಲ ಮಾತುಗಳನ್ನು ಕೇಳಿ ಕೇಳಿ ಲಲಿತೆಯ ಅತ್ತೆಯವರು ತಿಳಿದುಕೊಂಡರು.

ಶೇಖರನೊಡನೆ ಅವರು ಮಾತನ್ನು ಮುಗಿಸಿದಾಗ ಬೆಳದಿಂಗಳು ಬಿದ್ದಿತ್ತು. ಇದೇ ಸಮಯದಲ್ಲಿ ಗಿರೀಂದ್ರ ಮಹಡಿಯಿಂದ ಕೆಳಕ್ಕಿಳಿದ. ಬಹುಶಃ ತನ್ನ ಅಕ್ಕನ ಮನೆಗೆ ಹೋದಂತೆ ತೋರುತ್ತೆ. ಅವನನ್ನು ನೋಡಿ ಗುರುಚರಣರ ಹೆಂಡತಿ ಕೇಳಿದರು: "ನನ್ನ ಅಳಿಯನ ಪರಿಚಯ ನಿನಗಿಲ್ಲವೇನೊ ಶೇಖರ? ಇಂತಹ ಯೋಗ್ಯ ಯುವಕರು ದೊರೆಯುವದು

ಅಪರೂಪ."

"ಅಹುದು ಚಿಕ್ಕಮ್ಮ, ಅವರೊಡನೆ ನಾನು ಮಾತನಾಡಿದ್ದೇನೆ. ಅವರ ಪರಿಚಯ ನನಗಿದೆ" ಎಂದು ಶೇಖರ ಎದ್ದು ಹೊರಟ ಮನೆಗೆ. ಆದರೆ ಮಧ್ಯದಲ್ಲಿಯೇ ಅವನು ನಿಲ್ಲಬೇಕಾಯಿತು.

ಕತ್ತಲಲ್ಲಿ ಬಾಗಿಲ ಮರೆಯಲ್ಲಿ ನಿಂತು ಲಲಿತೆ "ಕೇಳಿ ಸ್ವಲ್ಪ. ಈವೊತ್ತು ಅಮ್ಮನನ್ನು ಕರೆಯಲು ಹೋಗುತ್ತೀರೊ?" ಎಂದಳು.

"ಹೌದು."

"ಶೋಕದಿಂದ ಅವರು ಬಹಳ ವ್ಯಾಕುಲರಾಗಿದ್ದಾರೊ? ಬಹಳ ನೊರಗಿರಬಹುದು."

"ಹೌದು, ಆವಾಗ ಹುಚ್ಚಿಯ-ತಾಗಿದ್ದಳು."

"ಈವಾಗ ಹೇಗಿದ್ದಾರೆ?"

"ಚೆನ್ನಾಗಿದ್ದಾಳೆ" ಎಂದವನೇ ಹೊರಟುಹೋದ.

ಮನೆಯಿಂದ ಹೊರಗೆ ಬರುವಷ್ಟರಲ್ಲಿ ಅವನ ಮೈ ಬೆವರಿದ್ದಿತು. ನಾಚಿಕೆಯಿಂದ ಮೈ ಜುಮ್ಮೆಂದಿತು. ಲಲಿತೆಯ ಸನ್ನಿಕಟದಲ್ಲಿ ನಿಂತು ಕೊಂಡಿದ್ದರಿಂದ ತನ್ನ ಶರೀರವು ಅಪವಿತ್ರವಾಯಿತೆಂದು ಅವನ ಭಾವನೆ.

ಮನೆಗೆ ಬಂದು ಪೆಟ್ಟಿಗೆಯಲ್ಲಿ ಸಾಮಾನುಗಳನ್ನು ತುಂಬಿದ. ಟ್ರೇನು ಬಿಡುವವಕ್ಕೆ ಇನ್ನೂ ಬಹಳ ಸಮಯವಿತ್ತು. ಆದುದರಿಂದ ಮಂಚದ ಮೇಲೆ ಸ್ವಲ್ಪ ಒರಗಿಕೊಂಡ. ಲಲಿತೆಯ ಸ್ಮರಣವನ್ನು ಸುಟ್ಟು ಬೂದಿಮಾಡಿಬಿಡಬೇಕೆಂದು ತನ್ನ ಹೃದಯದಲ್ಲಿ ತಿರಸ್ಕಾರದ ಜ್ವಾಲೆ ಯನ್ನು ಹೊತ್ತಿಸಿ ಪ್ರಜ್ವಲಿತಗೊಳಿಸಿದ. ಅದರ ಉರಿಯನ್ನು ತಾಳ ಲಾರದೆ ಆಡಬಾರದಂತಹ ಶಬ್ದಗಳನ್ನು ಅವಳಿಗೆ ಆಡಿದ. ಕುಟಿಲೆಯೆನ್ನು ವದಕ್ಕೂ ಹಿಂಜರಿಯಲಿಲ್ಲ. ಮಾತನಾಡುವಾಗ ಲಲಿತೆಯ ಆತ್ಮೀಯವರು "ಈ ವಿವಾಹವು ಸುಖ-ವಿವಾಹವಾಗಲಿಲ್ಲ, ಕೊನೆಯ ವರೆಗೂ ಇದು ಯಾರಿಗೂ ತಿಳಿಯಲಿಲ್ಲ, ಎಂದು ತಿಳಿಸಲು ಲಲಿತೆಯು ನನಗೆ ಮೊದಲೇ ಹೇಳಿದ್ದಳು" ಎಂದಿದ್ದರು. ಲಲಿತೆಯ ಈ ಧೃಷ್ಟತೆಯು ಶೇಖರನ ಹೃದಯದಲ್ಲಿ ಪ್ರಜ್ವಲಿಸುತ್ತಿದ್ದ ಅಗ್ನಿರಾಶಿಯ ಮೇಲೆ ಬಿದ್ದು ತನ್ನ

ಜ್ವಾಲೆಯ ಜಾಲವನ್ನು ಹರಡುತ್ತ ಉರಿಯಲಾರಂಭಿಸಿತು.

೧೨

ತಾಯಿಯನ್ನು ಕರೆದುಕೊಂಡು ಹಿಂತಿರುಗಿ ಊರಿಗೆ ಬಂದ ಶೇಖರ. ಅವನ ಮದುವೆಗೆ ಇನ್ನು ಎಂಟು-ಹತ್ತು ದಿನಗಳು ಇದ್ದವು.

೨-೩ ದಿನಗಳಾದ ಮೇಲೆ ಒಂದು ದಿನ ಲಲಿತೆಯು ಭುವನೇಶ್ವರೀ ದೇವಿಯವರ ಹತ್ತಿರ ಬಂದು ಕುಳಿತಳು. ಭುವನೇಶ್ವರೀದೇವಿಯವರ ಮದುವೆಯ ಸಾಮಾನುಗಳನ್ನು ತಯಾರಿಸುತ್ತ ಕುಳಿತಿದ್ದಳು. ಲಲಿತೆಯು ಅವರಿಗೆ ಸಹಾಯ ಮಾಡುತ್ತ ಕುಳಿತಿದ್ದಳು. ಅವಳು ಬಂದದ್ದು ಶೇಖರನಿಗೆ ಗೊತ್ತಿರಲಿಲ್ಲ. ಅವನು ಯಾವುದೋ ಕೆಲಸಕ್ಕೆಂದು 'ಅಮ್ಮಾ' ಎನ್ನುತ್ತ ತಾಯಿಯ ಕೋಣೆಗೆ ಬಂದ. ಅಲ್ಲಿ ಲಲಿತೆ ಕುಳಿತುದನ್ನು ನೋಡಿ ಅತ್ಯಂತ ಆಶ್ಚರ್ಯಚಕಿತನಾದ. ಲಲಿತೆ ತಲೆಬಾಗಿಸಿಕೊಂಡು ಕೆಲಸವನ್ನು ಮಾಡುತ್ತಿದ್ದಳು.

"ಏನು ಬೇಕೊ?"

"ಈಗ ಇರಲಿ ಬಿಡು ಅಮ್ಮಾ" ಎನ್ನುತ್ತ ಬೇಗನೇ ಅಲ್ಲಿಂದ ಹೊರಟುಹೋದ. ಲಲಿತೆಯ ಮುಖವು ಅವನಿಗೆ ಕಂಡಿದ್ದಿಲ್ಲ. ಎರಡು ಕೈಗಳು ಮಾತ್ರ ಕಂಡವು. ಅವುಗಳಲ್ಲಿ ಎರಡೆರಡು ಗಾಜಿನ ಬಳೆಗಳು ದೃಷ್ಟಿಗೋಚರವಾದವೇ ವಿನಾ ಮತ್ತಾವ ಆಭರಣಗಳೂ ಕಾಣಲಿಲ್ಲ. ಮನದೊಳಗೇ ಕ್ರೂರ ನಗೆ ನಕ್ಕು "ಇದೊಂದು ತರದ ಆಡಂಬರ!" ಎಂದ. ಗಿರೀಂದ್ರ ಶ್ರೀಮಂತನೆನ್ನುವದು ಆತನಿಗೆ ಗೊತ್ತು. ಈ ರೀತಿ ಅವನ ಪತ್ನಿಯ ಕರಗಳು ಅಲಂಕಾರರಹಿತವಾದುದರ ಕಾರಣವು ಅವನಿಗೆ ಹೊಳೆಯಲಿಲ್ಲ.

ಒಂದು ದಿನ ಸಾಯಂಕಾಲ ಅವನು ಭರದಿಂದ ತನ್ನ ರೂಮಿನಿಂದ ಕೆಳಗಿಳಿದು ಬರುತ್ತಿದ್ದ. ಲಲಿತೆಯು ಮೇಲಕ್ಕೆ ಹೋಗುತ್ತಿದ್ದಳು. ಇಬ್ಬರ ದರ್ಶನವೂ ಮೆಟ್ಟಿಲುಗಳ ಮೇಲೆ ಆಯಿತು. ಲಲಿತೆಯು ಒಂದು ಗೋಡೆಗೆ ಅಂಟಿಕೊಂಡು ನಿಂತಳು. ಶೇಖರನು ಸಮೀಪಕ್ಕೆ ಬಂದೊಡನೆಯೆ "ನಿಮಗೊಂದು ಮಾತು ಹೇಳಬೇಕಾಗಿದೆ" ಎಂದಳು.

ಶೇಖರ ಸ್ವಲ್ಪ ಮನದಲ್ಲಿ ಬೆದರಿದ. ವಿಸ್ಮಯದಿಂದ ಕೇಳಿದ "ಯಾರೊಡನೆ ಮಾತನಾಡಬೇಕ...ವೆ! ನನ್ನೊಡನೆಯೆ!"

ಲಲಿತೆಯು ಮೊದಲಿನಂತೆ ಮೆಲ್ಲನೆ "ಹೌದು ನಿಮ್ಮೊಡನೆಯೆ" ಎಂದಳು.

"ಈವಾಗ ಹೇಳಬೇಕಾದ ಮಾತು ಅಂತಹದೇನು ಉಳಿದಿದೆ?" ಎಂದು ಮೊದಲಿಗಿಂತಲೂ ಭರದಿಂದ ಮೆಟ್ಟಿಲುಗಳನ್ನು ಕೆಳಗಿಳಿದು ಹೋದನು.

ಲಲಿತೆಯು ಸ್ವಲ್ಪ ಹೊತ್ತು ಅಲ್ಲಿಯೇ ದಿಙ್ಮೂಢೆಯಾಗಿ ನಿಂತು ಒಂದು ದೊಡ್ಡದಾದ ನಿಟ್ಟುಸಿರು ಬಿಟ್ಟು ಮೆಲ್ಲನೆ ಹೊರಟುಹೋದಳು.

ಮರುದಿನ ಶೇಖರ ಪಡಶಾಲೆಯಲ್ಲಿ ಕುಳಿತು ಅಂದಿನ ದೈನಿಕಪತ್ರಿಕೆಯನ್ನು ಓದುತ್ತಿದ್ದ. ತನ್ನ ಮನೆಯ ಕಡೆಗೆ ಗಿರೀಂದ್ರ ಬರುವದು ಕಂಡಿತು. ಅವನಿಗೆ ಅತ್ಯಂತ ಆಶ್ಚರ್ಯ. ಗಿರೀಂದ್ರನು ಬಂದು ನಮಸ್ಕಾರಮಾಡಿ ಬಳಿಯಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತ. ಶೇಖರನೂ ನಮಸ್ಕಾರಮಾಡಿ ವೃತ್ತಪತ್ರಿಕೆಯನ್ನು ಒಂದು ಕಡೆ ಇಟ್ಟು ಮಾತನಾಡಲು ಸಿದ್ಧನಾಗಿ ಕುಳಿತ. ಇಬ್ಬರೂ ಒಬ್ಬರಿಗೊಬ್ಬರು ಪರಿಚಿತರು. ಆದರೂ ಮಾತನಾಡುವ ಪ್ರಸಂಗ ಅವರಿಗೆ ಬಂದಿರಲಿಲ್ಲ. ಅಂತಹ ಪ್ರಸಂಗವನ್ನು ತಂದುಕೊಳ್ಳಲು ಅವರು ಬಯಸಿಯೂ ಇರಲಿಲ್ಲ.

ಗಿರೀಂದ್ರ ತನ್ನ ಕಾರ್ಯದ ಮಾತನ್ನೇ ಎತ್ತಿದ. "ಒಂದು ವಿಶೇಷ ಕಾರ್ಯಕ್ಕಾಗಿ ತಮಗೆ ತೊಂದರೆ ಕೊಡಲು ಬಂದಿದ್ದೇನೆ. ನನ್ನ ಅತ್ತೆಯವರೊಡನೆ ನೀವು ಮಾತನಾಡಿದ್ದೀರಿ. ಅವರ ಅಭಿಲಾಷೆಯೇನಿದೆ ಎನ್ನುವದು ನಿಮಗೆ ಗೊತ್ತಾಗಿದೆ. ಅವರು ತಮ್ಮ ಮನೆ ನಿಮಗೆ ಮಾರಬೇಕೆನ್ನುತ್ತಾರೆ. ಪುನಃ ಇದೇ ಮಾತನ್ನು ನಿಮಗೆ ಹೇಳಲು ನನ್ನನ್ನು ಕಳಿಸಿಕೊಟ್ಟಿದ್ದಾರೆ. ಆದಷ್ಟು ಬೇಗನೇ ಇದರ ವ್ಯವಸ್ಥೆಯಾದರೆ ನಮಗೆ ಮರಳಿ ಮುಂಗೇರಿಗೆ ಹೋಗಲಿಕ್ಕಾಗುವದು."

ಗಿರೀಂದ್ರನನ್ನು ನೋಡುತ್ತಲೇ ಶೇಖರನ ಹೃದಯದಲ್ಲಿ ಬಿರುಗಾಳಿಯು ಬೀಸಿತು. ಗೀರಿಂದ್ರನ ನುಡಿಗಳು ಅವನಿಗೆ ಎಳ್ಳಷ್ಟೂ ರುಚಿ

ಸಲಿಲ್ಲ. ಅವನು ಅಪ್ರಸನ್ನತೆಯಿಂದ "ನಿಜ. ತಂದೆಯವರು ತೀರಿ ದಂದಿನಿಂದ ಮನೆಯ ಭಾರವೆಲ್ಲ ಹಿರಿಯ ಅಣ್ಣನ ಮೇಲೆಯೆ ಬಿದ್ದಿದೆ. ಅವರನ್ನೇ ನೀವು ಕಂಡು ಈ ವಿಷಯ ಮಾತನಾಡಿ" ಎಂದ.

ಗಿರೀಂದ್ರ ನಸುನಕ್ಕು "ಅದು ಸರಿಯೆ. ಅದು ನನಗೆ ತಿಳಿದ ವಿಷಯ. ದಯವಿಟ್ಟು ನೀವೇ ಈ ವಿಷಯವನ್ನು ಅವರಿಗೆ ತಿಳಿಸಿದರೆ ಹೆಚ್ಚು ಒಳಿತಾಗುವದು" ಎಂದ.

ಶೇಖರನೂ ಅದೇ ರೀತಿಯಾಗಿ "ನೀವು ಹೇಳಿದರೂ ಕೆಲಸವಾ ಗುತ್ತೆ. ಏಕೆಂದರೆ ಅತ್ತಕಡೆಯ ಹಿತೈಷಿಗಳು ನೀವೇ ಇದ್ದೀರಿ" ಎಂದ.

"ನಾನು ಹೇಳಬೇಕಾದುದು ಅವಶ್ಯವೆಂದೆನಿಸಿದ ಪಕ್ಷದಲ್ಲಿ ಹೇಳು ವದರಲ್ಲೇನೂ ಅಭ್ಯಂತರವಿಲ್ಲ ನನಗೆ. ಆದರೆ ನಿನ್ನೆ ದಿನ ನಮ್ಮ ಲಲಿ ತಕ್ಕ ನೀವು ಇತ್ತ ಲಕ್ಷ್ಯಗೊಟ್ಟರೆ ಕೆಲಸವು ಬೇಗನೇ ನೆರವೇರುವದೆಂದು ಹೇಳುತ್ತಿದ್ದಳು."

ಈ ವರೆಗೆ ಶೇಖರ ದೊಡ್ಡ ದಿಂಬಿಗೆ ಒರಗಿ ಕುಳಿತು ಮಾತನಾಡು ತ್ತಿದ್ದ. ಗಿರೀಂದ್ರನ ಮಾತನ್ನು ಕೇಳಿದಕೂಡಲೇ ಸ್ವಲ್ಪ ನೆಟ್ಟಗೆ ಎದ್ದು ಕುಳಿತು "ಏನೆಂದಿರಿ? ಯಾರು ಹೇಳುತ್ತಿದ್ದರು?" ಎಂದ.

"ಚಿಕ್ಕ ಸಹೋದರಿ—ಲಲಿತಕ್ಕ ಹೇಳುತ್ತಿದ್ದಳು."

ಶೇಖರನು ವಿಸ್ಮಯದಿಂದ ವಿಮೂಢನಾದ. ಬಳಿಕ ಗಿರೀಂದ್ರನು ಏನೇನು ಹೇಳಿದನೋ ಅದು ಅವನಿಗೆ ಕೇಳಿಸಲಿಲ್ಲ. ಸ್ವಲ್ಪ ಹೊತ್ತು ಗಿರೀಂದ್ರನ ಕಡೆ ವಿಹ್ವಲದೃಷ್ಟಿಯಿಂದ ನೋಡಿ ಕೇಳಿದ "ಕ್ಷಮಿಸಿ. ನಿಮ್ಮೊಡನೆ ಲಲಿತೆಯ ವಿವಾಹವಾಗಲಿಲ್ಲವೆ?"

ಗಿರೀಂದ್ರನು ನಾಲಿಗೆ ಕಚ್ಚಿ ನುಡಿದ: "ಇಲ್ಲ. ಆ ಮನೆಯವರ ಮಾತು ನಿಮಗೆ ಗೊತ್ತೇ ಇದೆ. ಕಾಲಿಯೊಡನೆ ನನ್ನ—"

"ಆದರೆ ನಿಶ್ಚಯ ಬೇರೆಯವರೊಡನೆ ಆಗಿದ್ದಿಲ್ಲವೆ?"

"ಹೌದು. ನಿಶ್ಚಯವೇನೋ ಬೇರೆಯೆ ಆಗಿತ್ತು. ಕಾಲಿಯೊಡನೆ ಮದುವೆಯಾಗುವ ಮಾತು ಆಗಿದ್ದಿಲ್ಲ, ಇದೂ ನಿಜವೆ. ಗುರುಚರಣರು

ಸಾಯುವ ಪೂರ್ವದಲ್ಲಿ ಮತ್ತೆ ಯಾರೊಡನೆಯೂ ಸಂಬಂಧ ಬೆಳೆಸದೆ ತಮ್ಮ ಮಗಳನ್ನೇ ಮದುವೆಯಾಗಬೇಕೆಂದು ಹೇಳಿದ್ದರು. ನಾನು ವಚನವನ್ನಿತ್ತಿದ್ದೆ. ಅವರು ಸತ್ತ ಮೇಲೆ ಒಂದು ದಿನ ಲಲಿತಕ್ಕ ನನಗೆ ಚೆನ್ನಾಗಿ ತಿಳಿಹೇಳಿದಳು: 'ನನ್ನ ಮದುವೆಯಾಗಿದೆ. ಆದರೆ ಯಾರಿಗೂ ಗೊತ್ತಿಲ್ಲ. ನನ್ನ ಪತಿದೇವರು ಇನ್ನೂ ಜೀವಿಸಿದ್ದಾರೆ.' ಈ ಮಾತಿನ ಮೇಲೆ ಯಾರೂ ವಿಶ್ವಾಸವಿಡಲಿಕ್ಕಿಲ್ಲ. ಆದರೆ ನಾನು ಅವಳ ಪ್ರತಿಯೊಂದು ಮಾತಿನ ಮೇಲೂ ವಿಶ್ವಾಸವನ್ನಿಟ್ಟೆ. ಯಾವ ಮಾತನ್ನೂ ಸುಳ್ಳೆಂದು ತಿಳಿಯಲಿಲ್ಲ; ಅಪನಂಬಿಕೆಯನ್ನಿಡಲಿಲ್ಲ. ಮೇಲಾಗಿ ಸ್ತ್ರೀಯ ವಿವಾಹ ಒಂದು ಸಲ ಆದ ಮೇಲೆ ಮತ್ತೊಂದು ಸಲ ಆಗುವದಿಲ್ಲ.—ಇದೇನು?"

ಶೇಖರನ ಕಣ್ಣುಗಳಲ್ಲಿ ಕಂಬನಿಗಳು ಮೊದಲೇ ತುಂಬಿಬಂದಿದ್ದವು. ಈವಾಗ ಅವು ಹೊರಸೂಸಿ ಬಂದು ಕಪೋಲಗಳ ಮೇಲೆ ಬಿದ್ದು ಗಿರೀಂದ್ರನ ಎದುರಿಗೆ ಧಾರೆಯಾಗಿ ಹೊಳೆಯಾಗಿ ಹರಿಯಲಾರಂಭಿಸಿದವು. ಶೇಖರನಿಗೆ ಇತ್ತ ಲಕ್ಷ್ಯವೇ ಇರಲಿಲ್ಲ. ಒಬ್ಬ ಪುರುಷ ಇನ್ನೊಬ್ಬ ಪುರುಷನ ಎದುರಿಗೆ ತನ್ನ ನಿರ್ಬಲತೆಯನ್ನು ತೋರಿಸುವದು ಎಂತಹ ನಾಚಿಕೆಯ ಮಾತು ಎನ್ನುವದು ಕೂಡ ಅವನಿಗೆ ತಿಳಿಯಲಿಲ್ಲ.

ಗಿರೀಂದ್ರ ಶೇಖರನನ್ನು ಒಂದೇ ಸಮನೆ ನೋಡಲಾರಂಭಿಸಿದ. ಅವನ ಸಂದೇಹ ಇಂದು ಸತ್ಯವಾಯಿತು. ಶೇಖರನೇ ಲಲಿತೆಯ ಪತಿಯೆಂಬುದನ್ನು ಮನಗಂಡ. ಶೇಖರನು ಅಶ್ರುಗಳನ್ನು ಒರೆಸಿಕೊಂಡು ಗದ್ಗದಕಂಠದಿಂದ ಕೇಳಿದನು: "ಆದರೆ ನೀವು ಲಲಿತೆಯನ್ನು ಪ್ರೀತಿಸುತ್ತಿರಲಿಲ್ಲವೇ?"

ಗಿರೀಂದ್ರನಿಗೆ ಸಹಿಸಲಾಗದ ವೇದನೆಯಾಯಿತು. ಅವನು ಅದನ್ನು ಹೊರಗೆ ಹಾಕಲಿಲ್ಲ. ನಗಲಾರಂಭಿಸಿದ. ಪೂರ್ವೋಕ್ತ ಪ್ರಶ್ನೆಗೆ ಉತ್ತರವನ್ನಿತ್ತ: "ಈ ಪ್ರಶ್ನೆಗೆ ಉತ್ತರವನ್ನೀಯುವದು ಆವಶ್ಯಕವಾದುದಲ್ಲ. ಮೇಲಾಗಿ ಪ್ರೇಮ-ಸ್ನೇಹ ಎಷ್ಟೇ ಇರಲಿ, ಒಂದು ಸಲ ಮದುವೆಯಾದವಳನ್ನು ಪುನಃ ಯಾರೂ ಮದುವೆಯಾಗುವದಿಲ್ಲ. ಈ ವಿಷಯವಾಗಿ ಇದಕ್ಕೂ ಹೆಚ್ಚಿಗೆ ನಾನು ಮಾತನಾಡಬಯಸುವದಿಲ್ಲ."

ಮತ್ತೆ ಗಿರೀಂದ್ರನು ನಕ್ಕು ಎದ್ದುನಿಂತು "ಒಳ್ಳೇದು, ಈವೊತ್ತು ಹೋಗಿಬರುವೆ. ಮತ್ತೆಂದಾದರೂ ಭೆಟ್ಟಿಯಾಗುವದು" ಎಂದು ನಮಸ್ಕಾರಮಾಡಿ ಹೊರಟುಹೋದ.

ಮೊದಲಿನಿಂದ ಶೇಖರ ಗಿರೀಂದ್ರನನ್ನು ದ್ವೇಷಿಸುತ್ತಿದ್ದ. ಅದು ಘೋರ ತಿರಸ್ಕಾರದ ರೂಪವನ್ನು ತಾಳಿತ್ತು. ಆದರೆ ಅದು ಇಂದೆಲ್ಲಿಗೆ ಹೋಯಿತು? ಗಿರೀಂದ್ರನು ಕುಳಿತ ಸ್ಥಳದ ಮೇಲೆ ಆಗಾಗ್ಗೆ ಮಸ್ತಕವನ್ನಿಟ್ಟು ವಂದಿಸುತ್ತಿದ್ದ; ಆ ಪವಿತ್ರ ಸ್ಥಳಕ್ಕೆ ಆಗಾಗ್ಗೆ ಮುದ್ದಿಡುತ್ತಿದ್ದ; ಆ ಅಪರಿಚಿತ ಬ್ರಹ್ಮಸಮಾಜದ ನವಯುವಕನ ಆದರ್ಶವನ್ನು ಅಂತಃಕರಣಪೂರ್ವಕವಾಗಿ ಪುನಃ ಪುನಃ ವಂದಿಸಿ ತನ್ನಷ್ಟಕ್ಕೆ ತಾನೇ ಮನುಷ್ಯನು ಎಂತಹ ಸ್ವಾರ್ಥತ್ಯಾಗವನ್ನು ಮಾಡಬಲ್ಲನು, ನಗುನಗುತ ಎಂತಹ ಕಠೋರ ಪ್ರತಿಜ್ಞೆಯ ಪಾಲನೆಯನ್ನು ಮಾಡಬಲ್ಲನು ಎನ್ನುವದನ್ನು ಕಣ್ಣಾರೆ ಕಂಡು ಅನುಭವಿಸಿದನು.

ಇಳಿಹೊತ್ತಿನಲ್ಲಿ ಭುವನೇಶ್ವರೀದೇವಿಯವರು ತಮ್ಮ ರೂಮಿನಲ್ಲಿ ಕುಳಿತು ಹೊಸ ಬಟ್ಟೆಗಳನ್ನು ಗಳಿಗೆಮಾಡಿ ಇಡುತ್ತಿದ್ದರು. ಅವರಿಗೆ ಲಲಿತೆಯು ನೆರವಾಗುತ್ತಿದ್ದಳು. ಇದೇ ಸಮಯಕ್ಕೆ ಸರಿಯಾಗಿ ಹೋಗಿ ಶೇಖರ ತನ್ನ ತಾಯಿಯ ಹಾಸಿಗೆಯ ಮೇಲೆ ಕುಳಿತ. ಆದರೆ ಈವೊತ್ತು ಲಲಿತೆಯನ್ನು ನೋಡುತ್ತಲೇ ಜಿಂಕೆಯಂತೆ ಅಂಜಿ ಓಡಿಹೋಗಲಿಲ್ಲ. ಭುವನೇಶ್ವರೀದೇವಿಯವರು ಅವನನ್ನು ನೋಡಿ ಕೇಳಿದರು: "ಏನು? ಏತಕ್ಕೆ ಬಂದೆ?"

ಶೇಖರ ಉತ್ತರವನ್ನೀಯಲಿಲ್ಲ. ಬಟ್ಟೆ ಗಳಿಗೆಹಾಕುವದನ್ನು ನೋಡಲಾರಂಭಿಸಿದ. ಸ್ವಲ್ಪ ಹೊತ್ತಿನ ಮೇಲೆ "ಇದನ್ನೇನು ಮಾಡುತ್ತಿರುವೆಯಮ್ಮಾ?" ಎಂದ.

"ಹೊಸ ಬಟ್ಟೆಗಳನ್ನು ಯಾರಿಗೆ ಎಷ್ಟೆಷ್ಟು ಕೊಡಬೇಕು ಎನ್ನುವದನ್ನು ಲೆಕ್ಕ ನೋಡುತ್ತಿದ್ದೇನೆ. ಬಟ್ಟೆಗಳು ಸಾಕಾಗುವದಿಲ್ಲ ಅಂತಾ ಕಾಣುತ್ತೆ. ಹೊಸ ಬಟ್ಟೆಗಳನ್ನು ಇನ್ನೂ ಕೊಳ್ಳಬೇಕಾಗುವದು, ಅಲ್ಲವೇನೇ ಲಲಿತಾ?"

ಲಲಿತೆಯು ತಲೆಯಲ್ಲಾಡಿಸಿ ಅನುಮತಿಯನ್ನಿತ್ತಳು.

ಶೇಖರನು ನಗುತ್ತ ನಗುತ್ತ "ನಾನು ವಿವಾಹ ಮಾಡಿಕೊಳ್ಳದಿದ್ದರೆ?" ಎಂದ.

ಭುವನೇಶ್ವರೀದೇವಿಯವರು ನಗುತ್ತ "ಇದನ್ನೂ ನೀನು ಮಾಡಬಲ್ಲೆ, ಹಾಗೋ!" ಎಂದರು.

ಶೇಖರನು ಮತ್ತಷ್ಟು ಗಟ್ಟಿಯಾಗಿ ನಗುತ್ತ "ಹೌದಮ್ಮ, ಈ ಮಾತೇ ಹೆಚ್ಚಾಗಿ ಸಂಭವಿಸುವ ಹಾಗಿದೆ" ಎಂದ.

ಭುವನೇಶ್ವರೀದೇವಿಯವರು ಗಂಭೀರವಾಣಿಯಿಂದ "ಇದೆಂತಹ ಮಾತು! ಇಂಥ ಅಮಂಗಲ ನುಡಿಯಬಾರದು."

"ಇಷ್ಟು ದಿನ ಯಾವ ಮಾತೂ ಬಾಯಿಂದ ನುಡಿಯಲಿಲ್ಲ ಅಮ್ಮಾ. ಈವಾಗ ಸುಮ್ಮನಿದ್ದರೆ ಎಲ್ಲವೂ ಕೆಡುವದು. ಮಹಾಪಾತಕವು ತಗಲುವದು."

ಭುವನೇಶ್ವರೀದೇವಿಯವರಿಗೆ ತಿಳಿಯಲಿಲ್ಲ. ಅವರು ಸಂಶಯದಿಂದ ಮಗನ ಮುಖವನ್ನು ನೋಡಲಾರಂಭಿಸಿದರು.

"ಅಮ್ಮಾ, ಈ ನಿನ್ನ ಮಗನ ಅನೇಕ ಅಪರಾಧಗಳನ್ನು ಕ್ಷಮಿಸಿರುವೆ. ಇದೂ ಒಂದನ್ನು ಕ್ಷಮಿಸಮ್ಮಾ, ನಾನು ನಿಜವಾಗಿಯೂ ಈ ಮದುವೆ ಮಾಡಿಕೊಳ್ಳಲಾರೆ."

ಮಗನ ಮುಖಲಕ್ಷಣವನ್ನು ಕಂಡು ಭುವನೇಶ್ವರೀದೇವಿಯವರು ನಿಜವಾಗಿಯೂ ಗಾಬರಿಯಾದರು. ಅದನ್ನು ಹೊರತೋರ್ಪಡಿಸದೆ "ಒಳ್ಳೇದು, ಹಾಗೇ ಆಗಲಿ, ಈವಾಗ ಇಲ್ಲಿಂದ ಹೋಗು. ಈ ರಾತ್ರಿ ನನ್ನನ್ನು ಪೀಡಿಸಬೇಡ ಶೇಖರ! ಈವಾಗ ಮಾಡಬೇಕಾದ ಕೆಲಸ ಬಹಳವಿದೆ" ಎಂದರು.

ಇನ್ನೊಂದು ಸಲ ನಗಲು ವ್ಯರ್ಥ ಪ್ರಯತ್ನಿಸಿ ದುಃಖವಾಣಿಯಿಂದ "ಇಲ್ಲಮ್ಮಾ, ನಾನು ನಿಜವಾಗಿಯೂ ಈ ಮದುವೆ ಮಾಡಿಕೊಳ್ಳುವದಿಲ್ಲ" ಎಂದ ಶೇಖರ.

"ಏನು ಇದು ಹುಡುಗಾಟವೇ?"

"ಹುಡುಗಾಟವಲ್ಲಮ್ಮಾ, ಆದುದರಿಂದಲೇ ಹೇಳುತ್ತಿದ್ದೇನೆ."

"ಸ್ಪಷ್ಟವಾಗಿ ಹೇಳು. ನಿನ್ನ ಸಂದಿಗ್ಧ ಮಾತುಗಳ ಅರ್ಥ ನನಗಾಗುವದಿಲ್ಲ" ಎಂದು ಕೋಪದಿಂದ ಕೇಳಿದರು.

ಶೇಖರ ಮೆಲ್ಲನೆ "ಮತ್ತೆಂದಾದರೂ ಹೇಳುವೆನಮ್ಮಾ" ಎಂದ.

"ಮತ್ತೆಂದಾದರೂ ಹೇಳುವ ಹಾಗಿದ್ದರೆ ನಾಳೆ ನನ್ನನ್ನು ಕಾಶಿಗೆ ಕಳಿಸಿಬಿಡು. ನಿಮ್ಮ ಮನೆಯಲ್ಲಿ ನಾನು ಹೆಚ್ಚಿಗೆ ದಿನ ನಿಲ್ಲಲಾರೆ. ಲಲಿತೆಯೂ ನನ್ನೊಡನೆ ಬರುವದಕ್ಕೆ ಸಿದ್ಧಳಾಗಿದ್ದಾಳೆ. ನಾನಿದ್ದರೆ ಅವಳ ವ್ಯವಸ್ಥೆಯನ್ನೂ ಮಾಡುವೆ" ಎಂದು ಅತ್ಯಂತ ಗಂಭೀರವಾಣಿಯಿಂದ ಭುವನೇಶ್ವರೀದೇವಿಯವರು ಹೇಳಿದರು.

ಶೇಖರ ಪ್ರಸನ್ನ ನಕ್ಕು "ಅಮ್ಮ, ಅವಳನ್ನು ನಿನ್ನೊಡನೆ ಕರೆದುಕೊಂಡು ಹೋಗುವೆ. ವ್ಯವಸ್ಥೆಯನ್ನು ಮಾಡುವೆ. ಇನ್ನೇನು ಬೇಕು ಹೆಚ್ಚಿಗೆ ಅವಳಿಗೆ? ನಿನ್ನ ಅಪ್ಪಣೆಗಿಂತ ಹೆಚ್ಚಿನ ಅಪ್ಪಣೆ ಅವಳಿಗೆ ಯಾರದು ಇದೆಯಮ್ಮಾ?" ಎಂದ.

ಮಗನು ನಗುವುದನ್ನು ನೋಡಿ ಅವಳ ಹೃದಯದಲ್ಲಿ ಆಶಾಂಕುರವು ಮೂಡಿತು. ಲಲಿತೆಯನ್ನು ನೋಡುತ್ತ "ಲಲಿತಾ, ಕೇಳಿದಿಯಾ ಇವನ ಮಾತುಗಳನ್ನು? ನಾನು ಬಯಸಿದರೆ ನಿನ್ನನ್ನು ಬೇಕಾದಲ್ಲಿಗೆ ಕರೆದುಕೊಂಡು ಹೋಗಬಹುದೆಂದು ತಿಳಿಯುತ್ತಾನೆ! ನೀನು ನನ್ನ ಅತ್ತೆಯ ಆಜ್ಞೆಯನ್ನು ಪಡೆಯುವದು ಅವಶ್ಯಕವಿಲ್ಲವೆಂದು ಭಾವಿಸಿದ್ದಾನೆ!" ಎಂದರು.

ಲಲಿತೆಯು ಉತ್ತರವನ್ನೀಯಲಿಲ್ಲ. ಶೇಖರನು ಮಾತನಾಡುವ ರೀತಿ ನೋಡಿ ಅವಳಿಗೆ ನಾಚಿಕೆಯಾಯಿತು. ಸಂಕೋಚವಾಯಿತು.

"ಅತ್ತೆಗೆ ಹೇಳಬೇಕಾಗಿದ್ದರೆ ಹೋಗಿ ಹೇಳಿ ಬರಲಿ. ಅವಳ ಇಷ್ಟ. ಆದರೆ ಅವಳಿಗೆ ನಿಜವಾದ ಆಜ್ಞೆ ನಿನ್ನದೇ ಅಮ್ಮ. ಹೀಗೆ ನಾನು ಭಾವಿಸುತ್ತೇನೆ. ನೀನು ಯಾರನ್ನು ಸಂಗಡ ಕರೆದುಕೊಂಡು ಹೋಗಬೇಕೆಂದಿರುವಿಯೊ ಅವಳೂ ಹೀಗೆಯೆ ತಿಳಿಯುತ್ತಾಳೆ. ಅವಳು ನಿನ್ನ ಸೊಸೆ" ಎಂದು ಶೇಖರ ತಲೆಬಾಗಿಸಿದ.

ಭುವನೇಶ್ವರೀದೇವಿಯವರಿಗೆ ಅತ್ಯಂತ ಆಶ್ಚರ್ಯ. ತಾಯಿಯ ಎದುರಿಗೆ ಮಗನ ತಮಾಷೆ ಇದೆಂತಹದು! ಒಂದೇ ದೃಷ್ಟಿಯಿಂದ ಅವನನ್ನು ನೋಡುತ್ತ “ಏನೆಂದೆ? ಅವಳು ನನಗೇನಾಗಬೇಕು?” ಎಂದರು.

ಶೇಖರನು ತಲೆಯನ್ನು ಮೇಲಕ್ಕೆತ್ತಲಿಲ್ಲ, ಎತ್ತುವದೂ ಅವನಿಂದಾಗಲಿಲ್ಲ; ಆದರೆ ಅವನು ಅತ್ಯಂತ ಮೆಲ್ಲನೆ ಉತ್ತರವನ್ನಿತ್ತ: “ಈವಾಗ ಹೇಳಿದೆನಲ್ಲಮ್ಮಾ, ಈ ಮಾತು ಇವತ್ತಷ್ಟೇ ಅಲ್ಲ, ಇವತ್ತಿಗೆ ನಾಲ್ಕು ವರ್ಷಗಳಾದುವು, ನಿಜವಾಗಿಯೂ ನೀನು ಅವಳ ತಾಯಿ (ಅತ್ತೆ). ಈ ವಿಷಯವಾಗಿ ಇದಕ್ಕೂ ಹೆಚ್ಚಿಗೆ ನಾನು ಹೇಳಲಾರೆ. ಅವಳನ್ನೇ ಕೇಳು, ಹೇಳುತ್ತಾಳೆ.”

ಇಷ್ಟರಲ್ಲಿ ಲಲಿತೆ ಭುವನೇಶ್ವರೀದೇವಿಯವರಿಗೆ ವಂದಿಸುವ ಸಿದ್ಧತೆ ಮಾಡುತ್ತಿದ್ದಳು. ಇದನ್ನು ಶೇಖರನು ನೋಡಿ ಅವಳ ಹತ್ತಿರ ಹೋಗಿ ನಿಂತ. ಇರ್ವರೂ ಏಕಕಾಲದಲ್ಲಿ ತಾಯಿಯ ಪೂಜ್ಯಪಾದಗಳ ಮೇಲೆ ತಮ್ಮ ಮಸ್ತಕಗಳನ್ನಿಟ್ಟು ನಮಸ್ಕರಿಸಿದರು. ಆ ಮೇಲೆ ಶೇಖರ ಮಾತನಾಡದಲೆ ಹೊರಟುಹೋದ.

ಭುವನೇಶ್ವರೀದೇವಿಯವರ ನೇತ್ರಗಳಿಂದ ಆನಂದಾಶ್ರುಗಳ ಧಾರೆಯು ಹರಿಯತೊಡಗಿತು. ಅವರು ವಾಸ್ತವವಾಗಿಯೂ ಲಲಿತೆಯನ್ನು ಅತ್ಯಂತ ಪ್ರೀತಿಸುತ್ತಿದ್ದರು. ಅವರು ತಮ್ಮ ಪೆಟ್ಟಿಗೆ ತೆರೆದು ಎಲ್ಲ ಆಭರಣಗಳನ್ನು ಹೊರಗೆ ತೆಗೆದು ಲಲಿತೆಗೆ ತೊಡಿಸುತ್ತ ಮೆಲ್ಲ ಮೆಲ್ಲಗೆ ಕೇಳಿ ಎಲ್ಲ ಗುಟ್ಟನ್ನು ಅರಿತುಕೊಂಡರು. ಆಮೇಲೆ “ಆದುದರಿಂದಲೇ ಗಿರೀಂದ್ರನ ಮದುವೆ ಕಾಲಿಯೊಡನೆ ಆಯಿತು” ಎಂದರು.

“ಹೌದಮ್ಮಾ, ಗಿರೀಂದ್ರನಂತಹ ಸಜ್ಜನರು ಸಿಕ್ಕುವದು ಬಹು ದುರ್ಲಭ. ನಾನವರಿಗೆ ನಡೆದ ಸಂಗತಿಯನ್ನು ತಿಳಿಸಿಹೇಳುತ್ತಲೇ ಎಲ್ಲವನ್ನು ಒಪ್ಪಿಕೊಂಡರು. ನನ್ನ ಮಾತಿನ ಮೇಲೆ ವಿಶ್ವಾಸವನ್ನಿಟ್ಟರು—ನನ್ನ ಮದುವೆಯಾಗಿದೆ, ನನ್ನ ಸ್ವಾಮಿ ಜೀವಂತ ಇದ್ದಾರೆ ಅಂತಾ” ಎಂದಳು ಲಲಿತೆ.

ಲಲಿತೆಯ ಮಸ್ತಕದ ಮೇಲೆ ತಮ್ಮ ಮಮತೆಯಿಂದ ತುಂಬಿ

ತುಳುಕುವ ಕೈಯನ್ನಿಟ್ಟು "ನಿನ್ನ ಸ್ವಾಮಿ ಜೀವಂತನಾಗಿದ್ದಾನೆ. ಮಗಳೆ, ಅವನು ಚಿರಜೀವಿಯಾಗಿರಲೆಂದು ಹರಸುವೆ. ನಾನು ಈವಾಗ ನನ್ನ ಹಿರಿಯಮಗ ಅವಿನಾಶನಿಗೆ ಹುಡುಗಿ ಬದಲಾಗಿದ್ದಾಳೆ ಅಂತಾ ಹೇಳಿಬರುತ್ತೇನೆ. ಅಲ್ಲಿಯ ವರೆಗೆ ನೀನು ಈ ಮನೆಯಲ್ಲಿ ಈ ನಿನ್ನ ಕೋಣೆಯಲ್ಲಿ ಸುಖದಿಂದ ಕುಳಿತುಕೊಂಡಿರು, ನನ್ನ ಮುದ್ದಿನ ಮಗನ ಮಡದಿ!" ಎಂದರು ಭುವನೇಶ್ವರೀದೇವಿಯವರು.

---